ಡಾ. ಎಂ. ವೆಂಕಟಸ್ವಾಮಿ

# ಹಕ್ಕಿಗಳಿಗೆ ವೀಸಾ ಕೊಟ್ಟವರ್‍ಯಾರು

(ಕವನ ಸಂಕಲನ)



# ಹಕ್ಕಿಗಳಿಗೆ ವೀಸಾ ಕೊಟ್ಟವರ್‍ಯಾರು

ಕವನ ಸಂಕಲನ

ಡಾ. ಎಂ. ವೆಂಕಟಸ್ವಾಮಿ




ಸಾಹಿತ್ಯ ಸುಗ್ಗಿ
ನಂ.40, 1ನೇ ಮುಖ್ಯರಸ್ತೆ, 2ನೇ ಹಂತ, 3ನೇ ಬ್ಲಾಕ್,
ನಾಗರಭಾವಿ, ಬೆಂಗಳೂರು-560 072.

# *Hakkigalige Veesa Kottavaryaru*

Poems written by

**Dr. M. Venkataswamy**
# 519, 39th Block, Type-5,
C.P.W.D. Quarters, H.S.R. Layout,
Bangalore-560 102.
Ph : 09449041334 / 080-8022584525
Email : alemarimvs@gmail.com

Published by
Smt. Geetha on behalf of **Sahitya Suggi**
No.40, 1st Main Road,
2nd Stage, 3rd Block, Nagarabhavi,
Bangalore - 560 072.



First Edition : 2012
Pages : 124+ iv
Price : Rs. 100/-
No. of Copies : 1000
Paper Used : 70 GSM Maplitho
Size : 1/8 Demy

**Cover Page :** D.S. Godavari

**D.T.P & Printed at :**
**Jagruthi Printers**
# 56/1-6, Narasimhaiah Garden,
Kottigepalya, Magadi Main Road,
Bangalore - 560 091. Phone : 080-23583850

## ಅರ್ಪಣೆ

ಕೆ. ರಾಮಯ್ಯ
ಜರಗನಹಳ್ಳಿ ಶಿವಶಂಕರ್
ನಿಡಸಾಲೆ ಪುಟ್ಟಸ್ವಾಮಯ್ಯ

## ನನ್ನೆರಡು ಮಾತು...

ಕವಿತೆ ಬರೆಯಲು ಧ್ಯಾನ ಮಾಡಬೇಕಿದೆ. ಈ ಭೂಮಿಯ ಮೇಲೆ, ಜನರ ಮಧ್ಯೆ ನಡೆಯುತ್ತಿರುವ ಘನಘೋರ ಅಪರಾಧಗಳು, ಅನ್ಯಾಯಗಳನ್ನು ಗಮನಿಸುತ್ತಿದ್ದರೆ ತೀರಾ ಆಘಾತವಾಗುತ್ತದೆ. ಈ ದಿನ ತುಸುವೇ ಒಳ್ಳೆಯ ಮನಸ್ಸಿರುವ ಜನರು ನೆಮ್ಮದಿಯಾಗಿ ಬದುಕುವುದೇ ದುಸ್ತರವಾಗಿ, ಎಲ್ಲವೂ ಕಣ್ಣುಗಳ ಮುಂದೆಯೇ ನಡೆಯುತ್ತಿದೆ. ನ್ಯಾಯಾಲಯಗಳೇ ಭ್ರಷ್ಟಾಚಾರದ ಕೇಂದ್ರಗಳಾಗಿರುವಾಗ ಇನ್ನು ಪೊಲೀಸು, ಖಾದಿ, ಕಾವಿ ಜನರು ಮಾತ್ರ ಏನು ಮಾಡಲೂ ಸಾಧ್ಯ. ಹಾಗೂ ಹೀಗೂ ಈಗಲೂ ಉಳಿದುಕೊಂಡಿರುವ ಶೇಕಡ ಹತ್ತೊ ಇಪ್ಪತ್ತೋ ಒಳ್ಳೆಯ ಜನರಿಂದ ಈ ದೇಶ ಸ್ವಲ್ಪವಾದರೂ ಮಾನದಿಂದ ಉಸಿರಾಡುತ್ತಿದೆ.

ಪ್ರಪಂಚ ತಲ್ಲಣಿಸಿಹೋಗಿರುವ ಈ ಹೊತ್ತಿನಲ್ಲಿ ಯಾವ ರೀತಿಯಲ್ಲಾದರೂ ಸರಿ, ಹಣವನ್ನೂ ಗುಡ್ಡೆ ಹಾಕಿಕೊಳ್ಳುವ ವ್ಯವಹಾರದಲ್ಲಿ ಮನುಷ್ಯರೆಲ್ಲ ಮುಳುಗಿ ಹೋಗಿದ್ದಾರೆ. ಕದ್ದವನನ್ನು ಜನರೇ ಹೊಡೆದು ಬಡಿದು ಪೊಲೀಸರಿಗೆ ಒಪ್ಪಿಸುತ್ತಾರೆ ಇಲ್ಲ ಸಾಯಿಸಿಬಿಡುತ್ತಾರೆ. ಆದರೆ ಕೋಟಿ ಕೋಟಿ ಲೂಟಿ ಹೊಡೆಯುವವರಿಗೆ ಯಾವ ಶಿಕ್ಷೆಯೂ ಇಲ್ಲ. ಆಧುನಿಕ ಐಟಿ/ಬಿಟಿ ಮಾಲೀಕರು ಪ್ರಪಂಚದಾದ್ಯಂತ ಅದನ್ನೇ ಮಾಡುತ್ತಿದ್ದಾರೆ. ಆದರೆ ಅದಕ್ಕೆ ಹೆಸರು ಬೇರೆ. ಒಂದು ಕಡೆ ನಕ್ಸಲರು, ಇನ್ನೊಂದು ಕಡೆ ಮತಾಂಧರ ಅಟ್ಟಹಾಸ, ನಡುವೆ ಜನರ ಪರದಾಟ ಹೆಚ್ಚುತ್ತಲೇ ಹೋಗುತ್ತಿದೆ. ಪ್ರಪಂಚದಲ್ಲಿರುವ ಎಲ್ಲಾ ಸಮಸ್ಯೆಗಳೂ ನಮ್ಮ ದೇಶಕ್ಕೆ ಅಮರಿಕೊಂಡಿವೆಯೇನೋ ಎನ್ನುವಷ್ಟು ಸಮಸ್ಯೆಗಳು ನಮ್ಮ ಮುಂದಿವೆ. ನಿಜವಾದ ಸಮಸ್ಯೆ ಎಂದರೆ ರಾಜಕಾರಣಿಗಳು, ಯೋಜನಾ ಪಂಡಿತರು, ಬುದ್ಧಿ ಜೀವಿಗಳು, ಅಧ್ಯಾಪಕರು, ಉನ್ನತ ಅಧಿಕಾರಿಗಳು ಯಾರೂ ಸಮಸ್ಯೆಗಳನ್ನು ಪೂರ್ಣವಾಗಿ ಪರಿಹರಿಸುವುದರ ಬಗ್ಗೆ ಯೋಚನೆಗಳನ್ನು ಮಾಡುತ್ತಿಲ್ಲ. ಎಲ್ಲವನ್ನೂ ತಾತ್ಕಾಲಿಕವಾಗಿಯೇ ಯೋಚಿಸುತ್ತಿದ್ದಾರೆ. ಇಡೀ ಪ್ರಪಂಚದಲ್ಲಿಯೇ ಹೆಚ್ಚು ಬಡವರು, ದೀನ ದಲಿತರು, ಕುರುಡರು, ಹೃದ್ರೋಗಿಗಳು, ಮಧುಮೇಹ ರೋಗಿಗಳು ಇರುವುದು ನಮ್ಮ ದೇಶದಲ್ಲಿಯೇ. ನೈಸರ್ಗಿಕ ಸಂಪತ್ತು

ಲೂಟಿಯಾಗಿ ಬೆಟ್ಟ–ಗುಡ್ಡ, ಅರಣ್ಯಗಳೇ ಮಾಯವಾಗಿ ಹೋಗುತ್ತಿವೆ. ಬೆಳೆಯುತ್ತಿರುವ ಜನಸಂಖ್ಯೆಯ ಬಗ್ಗೆ ಯಾರೂ ಯೋಚಿಸುತ್ತಿಲ್ಲ. ಹೊಟ್ಟೆ ಬಟ್ಟೆ ಒಂದು ಕಡೆಗಿರಲಿ ನೀರೂ ಸಹಾ ದೊರಕದೇ ಹಾಹಾಕಾರ ಬರುವ ದಿನಗಳು ದೂರವಿಲ್ಲ. ಬೆಂಗಳೂರು ಅದಕ್ಕೆ ದೊಡ್ಡ ಉದಾಹರಣೆಯಾಗಲಿದೆ.

ಇಂತಹ ಸನ್ನಿವೇಶದಲ್ಲಿ ಕವಿಗಳು ಧ್ಯಾನ ಮಾಡಿ ಒಳ್ಳೆ ಕವಿತೆ ಬರೆಯಲು ಸಾಧ್ಯವೇ? ಕವಿಗಳಿಗೆ ಕವಿತೆಗಳನ್ನು ಬರೆಯಲು ಸಮಯವಿದೆಯೇ? ಹೌದು! ಇಂತಹ ಸನ್ನಿವೇಶಗಳಲ್ಲೆ ಒಳ್ಳೆ ಕಾವ್ಯ, ಗಟ್ಟಿ ಕಾವ್ಯ ಹುಟ್ಟಿಬರುತ್ತದೆ ಎನ್ನುತ್ತಾರೆ ಕೆಲವರು. ಇಲ್ಲ ಒಳ್ಳೆ ಕವಿತೆ ಬರುವ ಕಾಲವೇ ಮುಗಿದು ಹೋಗಿದೆ ಎನ್ನುವುದು ಕೆಲವರ ವಾದ. ಅದು ಏನೇ ಆಗಲಿ ಎಲ್ಲವನ್ನೂ ಕಾಲವೇ ನಿರ್ಧರಿಸುತ್ತದೆ ಎನ್ನುವುದು ಹಳೆ ಮಾತು. ಎಲೆಕ್ಟ್ರಾನಿಕ್ ಮಾಧ್ಯಮದಿಂದ ಮುಂದೊಂದು ದಿನ ಪ್ರಿಂಟ್ ಮಾಧ್ಯಮವೇ ಪೂರ್ಣವಾಗಿ ನಿಂತುಹೋಗಬಹುದು. ಪತ್ರಿಕೆ ಮತ್ತು ಪುಸ್ತಕಗಳನ್ನು ಕೇವಲ ನೆಟ್‌ನಲ್ಲಿ ಮಾತ್ರ ನೋಡಬಹುದು. ಅಂತಹ ದಿನಗಳು ಬಂದರೆ ಆಶ್ಚರ್ಯ ಪಡಬೇಕಿಲ್ಲ. ಕವಿತೆ ಎನ್ನುವುದು ನನ್ನ ಮಟ್ಟಿಗೆ ಒಂದು ವಿಸ್ಮಯ. ನನ್ನನ್ನು ಬಹಳ ಕಾಡುವುದೆಂದರೆ ಈ ಭೂಮಿ, ಮರ ಮತ್ತು ಸಾವು. ಮರದ ಬಗ್ಗೆ ಒಂದು ಒಳ್ಳೆ ಕವಿತೆ ಬರೆಯಲು ಬಹಳ ವರ್ಷಗಳಿಂದಲೂ ಪ್ರಯತ್ನಿಸುತ್ತಿದ್ದೇನೆ. ಆದರೆ ಇದುವರೆಗೂ ನನ್ನಿಂದ ಸಾಧ್ಯವಾಗಿಲ್ಲ. ಮುಂದೆಯೂ ಆಗುತ್ತದೋ... ಇಲ್ಲವೋ ಗೊತ್ತಿಲ್ಲ. ಕನ್ನಡದಲ್ಲಿ ವೈಜ್ಞಾನಿಕ ಕವಿತೆಗಳು ತೀರಾ ವಿರಳ.

❊❊❊❊

ನನ್ನ ಮೊದಲನೆ ಕವನ ಸಂಕಲನ (1996ರಲ್ಲಿ)ಕ್ಕೆ ಬಂದ ಪ್ರತಿಕ್ರಿಯೆಗಳನ್ನು ಕೊನೆಯಲ್ಲಿ ಕೊಡಲಾಗಿದೆ. ಆಮೇಲೆ ಕವನ ಸಂಕಲನ ಹೊರ ತರಲು ನನಗೆ ಯಾಕೋ ಮನಸ್ಸೇ ಬರಲಿಲ್ಲ. ಆದರೂ ಕವಿತೆ ನನ್ನನ್ನು ಕಾಡುತ್ತಲೇ ಇದ್ದು ಆಗಾಗ ವರ್ಷಕ್ಕೋ ಆರು ತಿಂಗಳಿಗೋ ಒಮ್ಮೆ ಯಾವುದಾದರೂ ಒಳ್ಳೆ ಕವನ ಸಂಕಲನ/ಕವಿತೆಗಳನ್ನು ಓದಿಕೊಂಡಾಗ ಕವಿತೆ ಬರೆಯಬೇಕು ಎನ್ನುವ ಉತ್ಸಾಹ ಬರುತ್ತಿತ್ತು. ಈ ನಡುವೆ ಹಲವು ಕವಿತೆಗಳು ಹಲವಾರು ಪತ್ರಿಕೆಗಳಲ್ಲಿ ಪ್ರಕಟಗೊಳ್ಳುತ್ತಿದ್ದವು. ಇದರ ನಡುವೆ 25 ಕೃತಿಗಳ ಪ್ರಕಟಣೆಯೊಂದಿಗೆ ಹಲವಾರು ಪತ್ರಿಕೆಗಳಲ್ಲಿ ಕತೆ, ಕವನ, ಕಾದಂಬರಿ, ವೈಚಾರಿಕ, ವಿಮರ್ಶೆ ಮತ್ತು ವಿಜ್ಞಾನ ಲೇಖನಗಳು ಪ್ರಕಟವಾದವು.

ಕಳೆದ 15 ವರ್ಷಗಳಲ್ಲಿ ಬರೆದ ನನ್ನ ಎಲ್ಲಾ ಕವಿತೆಗಳನ್ನು ಇತ್ತೀಚೆಗೆ ತೆಗೆದುಕೊಂಡು ಓದಿದೆ. ಹಲವು ಮಿತ್ರರು ಈಗಲೂ ಆಗೊಮ್ಮೆ ಈಗೊಮ್ಮೆ ನನ್ನ ಮೊದಲನೇ ಕವನ ಸಂಕಲನದ ಬಗ್ಗೆ ಮಾತನಾಡುವುದು ಸ್ವಲ್ಪ ಆಶ್ಚರ್ಯ ಮತ್ತು ಸೋಜಿಗವೆನಿಸಿತು. ಗೆಳೆಯ ಸಿ.ವೆಂಕಟೇಶ ಅವರು ಅನೇಕ ವರ್ಷಗಳಿಂದ ಕವಿತೆಗಳನ್ನು ಪ್ರಕಟಿಸಿ ಎಂದು ಹೇಳುತ್ತಲೇ ಇರುತ್ತಾರೆ. ಮೊನ್ನೆ ತೀರಾ ಅಪರೂಪಕ್ಕೆ ಬರಗೂರು ರಾಮಚಂದ್ರಪ್ಪನವರ

ಮನೆಗೆ ಹೋಗಿದ್ದಾಗ ಅವರೂ ನನ್ನ ಕವಿತೆಗಳ ಬಗ್ಗೆ ಮಾತಾಡಿದರು. ಪರಿಣಾಮ ಈ ಕವಿತೆಗಳ ಗುಚ್ಛ ನಿಮ್ಮ ಮುಂದೆ ಬಂದಿದೆ. ಅವು ಎಷ್ಟರ ಮಟ್ಟಿಗೆ ಸಫಲವಾಗಿವೆಯೋ ನನಗೆ ತಿಳಿದಿಲ್ಲ.

✻✻✻

ಈ ಕವನ ಸಂಕಲನದ ಜೊತೆಗೆ ಇದೇ ವರ್ಷ ಪ್ರೇಜಸ್ ಪಬ್ಲಿಕೇಶನ್ಸ್‌ನಿಂದ ಈಶಾನ್ಯ ಭಾರತದ ಆಧುನಿಕ ಕವಿತೆಗಳು ಪ್ರಕಟಗೊಂಡಿವೆ. ಕಳೆದ ಎರಡೂವರೆ ವರ್ಷ ಶಿಲ್ಲಾಂಗ್‌ನಲ್ಲಿ ಉದ್ಯೋಗ ಮಾಡಿದ ಕಾರಣದಿಂದ ಈಶಾನ್ಯ ಭಾರತವೆಲ್ಲ ಓಡಾಡಿ ಸಾಕಷ್ಟು ಸಾಹಿತ್ಯವನ್ನು ಸಂಗ್ರಹಿಸಿಕೊಂಡು ಬೆಂಗಳೂರಿಗೆ ಹಿಂದಿರುಗಿ ಬಂದಿರುವೆ. ಈಶಾನ್ಯ ಭಾರತದ ಆಧುನಿಕ ಕವಿತೆಗಳು ಬಹಳ ವಿಶೇಷವಾದ ಕವಿತೆಗಳು ಎನ್ನುವುದು ನನ್ನ ಅಭಿಪ್ರಾಯ. ನಮ್ಮ ಬಹಳಷ್ಟು ಪ್ರಖ್ಯಾತ ಲೇಖಕರು ಎಷ್ಟೋ ದಶಕಗಳ ಹಿಂದೆಯೇ ಪಾಶ್ಚಾತ್ಯ, ಅಮೆರಿಕಾ ದೇಶಗಳ ಸಾಹಿತ್ಯವನ್ನೆಲ್ಲ ಪೈಪೋಟಿಗೆ ಬಿದ್ದು ಕನ್ನಡಕ್ಕೆ ತಂದಿದ್ದಾರೆ. ಹಾಗೆಯೇ ದೇಶದ ನಾನಾ ಭಾಷೆಗಳಲ್ಲಿ ಬಂದಿರುವ ಪ್ರಖ್ಯಾತ ಲೇಖಕರ ಸಾಹಿತ್ಯವನ್ನೂ ತರ್ಜುಮೆ ಮಾಡಿದ್ದಾರೆ. ಆದರೆ ನಮ್ಮದೇ ದೇಶದ ಈಶಾನ್ಯ ಭಾಗದ ಬಗ್ಗೆ ಗೊತ್ತಿರುವುದು ತೀರಾ ವಿರಳ.

**ಕೃತಜ್ಞತೆಗಳು :**

ಮೊದಲ ಕವನ ಸಂಕಲನದ ಬಗ್ಗೆ ಪ್ರೀತಿಯಿಂದ ನಾಲ್ಕು ಮಾತುಗಳನ್ನು ಬರೆದ ಕನ್ನಡ ಪ್ರಭ, ಲಂಕೇಶ್ ಪತ್ರಿಕೆ, ದಿ.ಹಿಂದೂ ಪತ್ರಿಕೆ ಸಂಪಾದಕರಿಗೆ; ಶ್ರೀಜರಗನಹಳ್ಳಿ ಶಿವಶಂಕರ್, ಶ್ರೀ ಕೆ.ರಾಮಯ್ಯ, ಶ್ರೀ ಸಿ.ವೆಂಕಟೇಶ, ಡಾ.ಸಿ.ಎಮ್.ರಾಮಚಂದ್ರ, ಡಾ.ನಟರಾಜ್ ಹುಳಿಯಾರ್, ಡಾ.ಮೊಗಳ್ಳಿ ಗಣೇಶ್, ಪ್ರೊ.ಸಿ.ವೀರಣ್ಣ, ಪ್ರೊ.ಚಂದ್ರಶೇಖರ ಪಾಟೀಲ, ಡಾ.ಬರಗೂರು ರಾಮಚಂದ್ರಪ್ಪ, ಡಾ.ವಿ.ಮುನಿವೆಂಕಟಪ್ಪ, ಡಾ.ಜಿ.ರಾಮಕೃಷ್ಣ ಶ್ರೀಮತಿ ಉತ್ತನೂರು ರಾಜಮ್ಮ ಇನ್ನೂ ಹಲವು ಮಿತ್ರರು ಮತ್ತು ಸಾಹಿತ್ಯ ಪ್ರಿಯರಿಗೆ.

ಇಲ್ಲಿನ ಕವಿತೆಗಳನ್ನು ಪ್ರಕಟಿಸಿದ ಪ್ರಜಾವಾಣಿ, ಮಯೂರ, ವಿಜಯಕರ್ನಾಟಕ, ಕನ್ನಡ ಪ್ರಭ, ಸಂಯುಕ್ತ ಕರ್ನಾಟಕ, ಹೊಸತು, ಅಗ್ನಿ, ಲಂಕೇಶ್ ಪತ್ರಿಕೆ, ಕಸ್ತೂರಿ, ಮಲ್ಲಿಗೆ, ತುಷಾರ, ಕರ್ನಾಟಕ ಸುವರ್ಣ ಕಾವ್ಯ, ದಲಿತ ಕಾವ್ಯ, ಬಹುಜನರ ಕಾವ್ಯ, ಸಂಕ್ರಮಣ ಮತ್ತು ಇನ್ನಿತರ ಪತ್ರಿಕೆಗಳ ಸಂಪಾದಕರಿಗೆ. ಈ ಕವನ ಸಂಕಲನವನ್ನು ಹೊರ ತಂದಿರುವ ಸಾಹಿತ್ಯ ಸುಗ್ಗಿ ಪ್ರಕಾಶನದ ಶ್ರೀಮತಿ ಗೀತಾ, ಅಂದವಾಗಿ ಒಳಪುಟ ವಿನ್ಯಾಸ ಮಾಡಿದ ಶ್ರೀ ಮಹೇಶ್ ಅವರಿಗೂ, ಸುಂದರವಾಗಿ ಮುದ್ರಿಸಿದ ಜಾಗೃತಿ ಪ್ರಿಂಟರ್ಸ್ ಬಳಗಕ್ಕೂ ಮತ್ತು ಅಂದವಾದ ಹೊದಿಕೆಯನ್ನು ಬಿಡಿಸಿರುವ ಖ್ಯಾತ ಕಲಾವಿದೆ ಶ್ರೀಮತಿ ಡಿ.ಎಸ್. ಗೋದಾವರಿ ಅವರಿಗೆ. ಕೊನೆಯದಾಗಿ ಶ್ರೀಮತಿ ಸುಶೀಲ ಮತ್ತು ಕ್ರಾಂತಿಗೆ.

– ಡಾ. ಎಂ. ವೆಂಕಟಸ್ವಾಮಿ

## ವ್ಯಕ್ತಿ ಪರಿಚಯ

ಭೂವಿಜ್ಞಾನಿ ಮತ್ತು ಲೇಖಕರಾಗಿ ಹೆಸರು ಮಾಡಿರುವ ಡಾ. ಎಂ.ವೆಂಕಟಸ್ವಾಮಿ ಕೋಲಾರ ಜಿಲ್ಲೆ, ಬಂಗಾರಪೇಟೆ ತಾಲೂಕಿನ ಬ್ಯಾಟರಾಯನಹಳ್ಳಿಯಲ್ಲಿ 06.11.1955 ರಲ್ಲಿ ಜನಿಸಿದರು. ಕೆ.ಜಿ.ಎಫ್ ಪ್ರಥಮ ದರ್ಜೆ ಕಾಲೇಜಿನಲ್ಲಿ. ಬಿ.ಎಸ್ಸಿ ಮತ್ತು ಬೆಂಗಳೂರು ವಿಶ್ವವಿದ್ಯಾಲಯದಲ್ಲಿ (ಭೂವಿಜ್ಞಾನದಲ್ಲಿ) ಎಂ.ಎಸ್ಸಿ ಮುಗಿಸಿ ಭಾರತೀಯ ಭೂವೈಜ್ಞಾನಿಕ ಸರ್ವೇಕ್ಷಣ ಸಂಸ್ಥೆಗೆ (ಜಿ.ಎಸ್.ಐ) ಸೇರಿ ಭಾರತದಾದ್ಯಂತ ಓಡಾಡಿ ಅಪಾರ ಅನುಭವ ಪಡೆದಿದ್ದಾರೆ.

ಈಶಾನ್ಯ ಭಾರತದಿಂದ ಪಾಕಿಸ್ತಾನದ ಹಿಮಾಲಯಗಳು-ಗುಲ್‌ಮಾರ್ಗ್-ಸೋನಾಮಾರ್ಗ್ ಹಿಮ ಪರ್ವತಗಳ ಉದ್ದಕ್ಕೂ ಓಡಾಡಿದ್ದಾರೆ. ರಾಜಸ್ತಾನದ ಅರಾವಳಿ ಬೆಟ್ಟಗಳು-ಜಾವರ್ ಲೆಡ್ ಜಿಂಕ್ ಗಣಿಗಳು, ಉತ್ತರ ಪ್ರದೇಶದ ಗಂಗಾ-ಯಮುನಾ ಬಯಲುಗಳು, ಬಿಹಾರ್ ಕಲ್ಲಿದ್ದಲು ಗಣಿಗಳು, ಕೋಲಾರ ಚಿನ್ನದ ಗಣಿಗಳು-ಹಟ್ಟಿ ಚಿನ್ನದ ಗಣಿಗಳ ಸುತ್ತಮುತ್ತಲೂ ಚಿನ್ನದ ಬಗ್ಗೆ ಸಂಶೋಧನೆಗಳನ್ನು ಮತ್ತು ಉತ್ತರ ಕರ್ನಾಟಕದಲ್ಲಿ 76 ಧಾತುಗಳ ಬಗ್ಗೆ ವಿಶೇಷ ಸಂಶೋಧನೆ ನಡೆಸಿದ್ದಾರೆ. 1988-1992ರವರೆಗೆ ನಾಗಾಲ್ಯಾಂಡ್‌ನಲ್ಲಿ ಅನಂತರ 2007-2010ರವರೆಗೂ ಮೇಘಾಲಯ ರಾಜ್ಯಗಳಲ್ಲಿ ಭೂವಿಜ್ಞಾನ ಸಂಶೋಧನೆಯಲ್ಲಿ ನಿರತರಾಗಿದ್ದರು. 1984ರಿಂದ 1988ರವರೆಗೆ ಉತ್ತರ ಪ್ರದೇಶದಲ್ಲಿ ಕಾರ್ಯಕ್ಷೇತ್ರ ನಿರ್ವಹಿಸಿದ್ದರು.

ಚೀನಾ ದೇಶದಲ್ಲಿ ಒಂದು ತಿಂಗಳು ಕಾಲ (2004ರಲ್ಲಿ) ಭೂರಾಸಾಯನಿಕ ತಂತ್ರಜ್ಞಾನದಲ್ಲಿ ತರಬೇತಿ ಪಡೆದು ಬಂದಿದ್ದಾರೆ. ಚೀನಾ ಪ್ರವಾಸದಲ್ಲಿ ಚೀನಾ ಮಹಾಗೋಡೆ, ಸ್ವರ್ಗ ದೇವಾಲಯ, ಫರ್‌ಬಿಡನ್ ಸಿಟಿ, ಪೆಕ್ಕಿಂಗ್ ಮ್ಯಾನ್ ಗುಹೆಗಳು, ಮಂಗೋಲಿಯಾದ ಗೋಬಿ ಮರಳುಗಾಡನ್ನು ನೋಡಿ ಬಂದಿದ್ದಾರೆ. ಇದೇ ಹಿನ್ನೆಲೆಯಲ್ಲಿ ಡ್ರ್ಯಾಗನ್ಸ್ ಮಹಾಗೋಡೆಯೊಳಗೆ (ಪ್ರವಾಸ ಕಥನ) ಕೃತಿಯನ್ನು ಜಾಗೃತಿ ಪ್ರಿಂಟರ್ಸ್

ಪ್ರಕಟಿಸಿದೆ. ಒಂದು ದಶಕಕ್ಕಿಂತ ಹೆಚ್ಚು ಕಾಲ ಉತ್ತರ ಮತ್ತು ಈಶಾನ್ಯ ಭಾರತದಲ್ಲಿ ಕೆಲಸ ನಿರ್ವಹಿಸಿದ ಅನುಭವಗಳ ಆಧಾರದ ಮೇಲೆ 'ಅಲೆಮಾರಿಯ ಹೆಜ್ಜೆಗಳು ಪ್ರವಾಸ ಕಥನವನ್ನು ಕನ್ನಡ ಪುಸ್ತಕ ಪ್ರಾಧಿಕಾರ ಪ್ರಕಟಿಸಿ ಅಪಾರ ಮೆಚ್ಚಿಗೆ ಪಡೆದಿದೆ. ನವಕರ್ನಾಟಕ ಪಬ್ಲಿಕೇಷನ್‌ನಿಂದ ಅಸ್ಪೃಶ್ಯರು (ಒಂದು ವಿಶ್ಲೇಷಣೆ) ಎಂಬ ಸಂಶೋಧನಾ ಕೃತಿ ಪ್ರಕಟಣೆಯಾಗಿದೆ.

ಕನ್ನಡದ ಹೆಸರಾಂತ ಪತ್ರಿಕೆಗಳಲ್ಲಿ ಇವರ ಹಲವಾರು ಕತೆ, ಕವನ, ಕಾದಂಬರಿ, ವೈಚಾರಿಕ, ವಿಮರ್ಶೆ ಮತ್ತು ವಿಜ್ಞಾನ ಲೇಖನಗಳು ಪ್ರಕಟವಾಗಿವೆ. ಕೆಲವು ಟಿ.ವಿ ಧಾರಾವಾಹಿಗಳಿಗೆ ಚಿತ್ರಕತೆ ಸಂಭಾಷಣೆ ಬರೆದಿದ್ದಾರೆ. ರೇಡಿಯೊ ಕಾರ್ಯಕ್ರಮಗಳನ್ನು ನೀಡಿದ್ದಾರೆ. ಕನ್ನಡ, ತೆಲುಗು, ತಮಿಳು, ಹಿಂದಿ ಮತ್ತು ಇಂಗ್ಲೀಷ್ ಭಾಷೆಗಳನ್ನು ಬಲ್ಲವರಾಗಿದ್ದಾರೆ. ಕೋಲಾರ ಚಿನ್ನದ ಗಣಿಗಳ ಬಗ್ಗೆ ನಡೆಸಿದ ಸಮಗ್ರ ಅಧ್ಯಯನಕ್ಕೆ ಹಂಪಿ ಕನ್ನಡ ವಿಶ್ವವಿದ್ಯಾಲಯ ಡಿ.ಲಿಟ್ ಪದವಿ ನೀಡಿದೆ. ಈ ಕೃತಿ ಕನ್ನಡದಲ್ಲೂ ಪ್ರಕಟಣೆಯಾಗಿದ್ದು, ಇಂಗ್ಲೀಷ್‌ನಲ್ಲಿ ಪ್ರಕಟಣೆಯಾಗಲಿದೆ.

## ಪ್ರಕಟಿತ ಕೃತಿಗಳು

**ಕವನ ಸಂಕಲನ :**

1. ಬೆಟ್ಟಗುಡ್ಡಗಳ ಬೋಗುಣಿಯಲ್ಲಿ
2. ಹಕ್ಕಿಗಳಿಗೆ ವೀಸಾ ಕೊಟ್ಟವರ್‍ಯಾರು
3. ಈಶಾನ್ಯ ಭಾರತದ– ಆಧುನಿಕ ಕವಿತೆಗಳು

**ಕಥಾಸಂಕಲನ :**

4. ಈಶಾನ್ಯ ಭಾರತದ ಆಧುನಿಕ ಮತ್ತು ಐತಿಹ್ಯ ಕಥೆಗಳು (ನವಕರ್ನಾಟಕ ಪಬ್ಲಿಕೇಷನ್ಸ್)

**ವಿಮರ್ಶೆ :**

5. ಓದುವ ಹಾದಿಯಲ್ಲಿ

**ಪ್ರವಾಸ ಕಥನ :**

6. ಅಲೆಮಾರಿಯ ಹೆಜ್ಜೆಗಳು (ಕ.ಪು.ಪ್ರಾ.)
7. ಡ್ರ್ಯಾಗನ್ಸ್ ಮಹಾಗೋಡೆಯೊಳಗೆ (ಚೀನಾ ಪ್ರವಾಸ ಕಥನ)

**ಅನುಭವ ಕಥನ :**

8. ಈಶಾನ್ಯ ಭಾರತದ ಅನುಭವ ಕಥನ (ನವಕರ್ನಾಟಕ ಪಬ್ಲಿಕೇಷನ್ಸ್)

**ವೈಚಾರಿಕ :**

9. ಅಸ್ಪೃಶ್ಯರು (ಒಂದು ವಿಶ್ಲೇಷಣೆ), ನವಕರ್ನಾಟಕ ಪಬ್ಲಿಕೇಷನ್ಸ್

**ಕಾದಂಬರಿಗಳು :**

10. ಚಂದ್ರನಿಲ್ಲದ ಆಕಾಶ
11. ಇನ್ನಿಲ್ಲದ ಪ್ರೀತಿ
12. ಭೂಮಿ ತೂಕದ ಹುಡುಗ
13. ರೂಪರಾಶಿಯರು
14. ಬೆಂಗಳೂರು ವೈ2ಕೆ50
15. ಮೂಡಲ ಮರೆಯಲ್ಲಿ
16. ನೀ ನಡೆವ ಹಾದಿಯಲ್ಲಿ

ವಿಜ್ಞಾನ :

17. ಸರ್. ಚಾರ್ಲ್ಸ್ ಲಯಲ್ (ಕ.ಪು.ಪ್ರಾ)
18. ಭೂಮಿ ಗುಡುಗಿದಾಗ (ಭೂಕಂಪನಗಳು)
19. ನಮ್ಮ ಹಿಮಾಲಯ
20. ಚಂಡಮಾರುತ
21. ಮಾನವ ಮಿದುಳೆಂಬ ಮಹಾ ಅದ್ಭುತ
22. ಸುನಾಮಿ ಸುತ್ತ (ಕ.ಸಾ.ಪ)
23. ಪೃಥ್ವಿಯ ಯಶೋಗಾಥೆ
24. ಕೋಲಾರ ಚಿನ್ನದ ಗಣಿಗಳು

ಭಾರತೀಯ ಭೂವೈಜ್ಞಾನಿಕ ಸರ್ವೇಕ್ಷಣ ಸಂಸ್ಥೆಯಲ್ಲಿ ಕರ್ನಾಟಕ ರಾಜ್ಯದ ಎಲ್ಲಾ ಜಿಲ್ಲೆಗಳ ಖನಿಜ ನಕ್ಷೆಗಳನ್ನು ಅದಕ್ಕೆ ಸಂಬಂಧಪಟ್ಟ ಪತ್ರವನ್ನು ತಯಾರಿಸಿದ್ದಾರೆ.

ಪತ್ರಿಕೆಗಳಲ್ಲಿ ಧಾರಾವಾಹಿಗಳಾಗಿ ಪ್ರಕಟಗೊಂಡ ಕಾದಂಬರಿಗಳು ಮತ್ತು ಪ್ರವಾಸ ಕಥನಗಳು.

- ರೂಪರಾಶಿಯರು (ಕನ್ನಡ ಪ್ರಭ ದಿನ ಪತ್ರಿಕೆ)
- ಮೂಡಲ ಮರೆಯಲ್ಲಿ (ಕನ್ನಡ ಪ್ರಭ ದಿನ ಪತ್ರಿಕೆ)

- ಬೆಂಗಳೂರು–ವೈ2ಕೆ50 (ವೈಜ್ಞಾನಿಕ ಕಾದಂಬರಿ) (ಕನ್ನಡ ಪ್ರಭ ದಿನ ಪತ್ರಿಕೆ)
- ನೀ ನಡೆವ ದಾರಿಯಲ್ಲಿ (ಉದಯವಾಣಿ ದಿನ ಪತ್ರಿಕೆ)
- ಅಲೆಮಾರಿಯ ಹೆಜ್ಜೆಗಳು, ಕೆಲವು ಭಾಗಗಳು (ಹೊಸತು ಮಾಸ ಪತ್ರಿಕೆ)
- ಡ್ರ್ಯಾಗನ್ಸ್ ಮಹಾಗೋಡೆಯೊಳಗೆ (ಅಗ್ನಿ ವಾರಪತ್ರಿಕೆ)
- ಡ್ರ್ಯಾಗನ್ಸ್ ಮಹಾಗೋಡೆಯೊಳಗೆ, ಕೆಲವು ಭಾಗಗಳು (ಸುಧಾ ವಾರ ಪತ್ರಿಕೆ)
- 70 ಕ್ಕಿಂತ ಹೆಚ್ಚು ವೈಜ್ಞಾನಿಕ ಲೇಖನಗಳು ಕನ್ನಡ ಪ್ರಭದಲ್ಲಿ ಪ್ರಕಟಗೊಂಡಿವೆ.
- 70 ಕ್ಕಿಂತ ಹೆಚ್ಚು ಕೃತಿಗಳ ವಿಮರ್ಶೆ ಉದಯವಾಣಿ/ವಿಜಯವಾಣಿಯಲ್ಲಿ ಪ್ರಕಟಗೊಂಡಿದೆ
- ಕೆಂಡಸಂಪಿಗೆ ವೆಬ್ ಪತ್ರಿಕೆಯಲ್ಲಿ ಈಶಾನ್ಯ ಭಾರತದ ಬಗ್ಗೆ ಲೇಖನಗಳ ಮಾಲೇ ಬಂದಿದೆ.

**ಮನೆ ವಿಳಾಸ :**

**ಎಂ. ವೆಂಕಟಸ್ವಾಮಿ**

# 519, 39ನೇ ಬ್ಲಾಕ್, ಟೈಪ್ 5,
ಸಿ ಪಿ ಡಬ್ಲ್ಯೂ ಡಿ ಕ್ವಾಟ್ರಸ್,
ಎಚ್.ಎಸ್.ಆರ್. ಬಡಾವಣೆ
ಬೆಂಗಳೂರು 560 102.
ಚಲನಾವಾಣಿ: 09449041334
ಮನೆ 080–8022584525
Email : alemarimvs@gmail.com

# ಪರಿವಿಡಿ

# ಪರ್ವತಗಳು

ಪರ್ವತಗಳನ್ನು
ಯಾರು ಎತ್ತಿ ನಿಲ್ಲಿಸಿದರು ಅಷ್ಟು ಎತ್ತರಕ್ಕೆ-

ಪಂಚಭೂತಗಳ ನುಂಗಿಕೊಂಡು
ಕಾಡು ಕಣಿವೆ, ಜೀವನದಿಗಳ ಬೆನ್ನಿಗೆ ಸುತ್ತಿಕೊಂಡು;
ಸಕಲ ಜೀವಸಂಕುಲಕ್ಕೆ ಅಣು ಅಣು ಗುಟುಕು ನೀಡಿ-
ಮುಗಿಲುಗಳ ಕೈ ಹಿಡಿದು ನಡೆಸುವ
ಪರ್ವತಗಳನ್ನು
ಯಾರು ಎತ್ತಿ ನಿಲ್ಲಿಸಿದರು ಅಷ್ಟು ಎತ್ತರಕ್ಕೆ-

ಎದೆಯ ಕುಲುಮೆಯಲ್ಲಿ ರೂಪುಗೊಳ್ಳುವ
ಚಿನ್ನ ಬೆಳ್ಳಿ ವಜ್ರ ವೈಢೂರ್ಯಗಳು;
ತಲೆಯ ಮೇಲೆ ತಣ್ಣನೆ ಸೂರ್ಯ-
ಅದರಾಚೆಯ ದೇವಲೋಕದಿಂದ
ಬೆಳಕು ರಥಗಳ ಕರೆದು ತರುವ
ಪರ್ವತಗಳನ್ನು
ಯಾರು ಎತ್ತಿ ನಿಲ್ಲಿಸಿದರು ಅಷ್ಟು ಎತ್ತರಕ್ಕೆ-

ನದಿಗಳನ್ನು ಸಮುದ್ರ ತಲುಪಿಸಿ
ಮೋಡಗಳಿಗೆ ಗಡಿಗೆ ಕೊಟ್ಟು;
ಭೂಕಂಪ-ಜ್ವಾಲಾಮುಖಿಗಳನ್ನು ನುಂಗಿಕೊಳ್ಳುವ
ಪರ್ವತಗಳನ್ನು

ಯಾರು ಎತ್ತಿ ನಿಲ್ಲಿಸಿದರು ಅಷ್ಟು ಎತ್ತರಕ್ಕೆ-
ಆಕಾಶದಲ್ಲಿ ಸಾಲು ಸಾಲು ಶಿಖರ ಶ್ರೇಣಿಗಳ ಚುಚ್ಚಿಟ್ಟು
ಸುತ್ತಲೂ ಗಿಡಮರಗಳ ಹಚ್ಚಿಟ್ಟು
ನೆಲದ ಸುತ್ತಲೂ ಸಮುದ್ರಗಳ ಸೃಷ್ಟಿಸಿರುವ
ಪರ್ವತಗಳನ್ನು
ಯಾರು ಎತ್ತಿ ನಿಲ್ಲಿಸಿದರು ಅಷ್ಟು ಎತ್ತರಕ್ಕೆ-

ದೇಶ ನಾಶವಾದರೂ ಪರ್ವತಗಳು ಮತ್ತು
ನದಿಗಳು ಉಳಿದುಕೊಳ್ಳುತ್ತವೆ.

# ಯಾರು ಬಿಟ್ಟು ಹೋದ ಚಿಹ್ನೆಗಳು

ಕಡಲಿಗೆ ಬಿದ್ದ ಕಣ್ಣ ನೀಲಿ
ಸಮುದ್ರವಾಯಿತೆ–
ಮಿಲಿಯಾಂತರ ಉಲ್ಕಾಪಾತಗಳ
ಕೊಲೆಯಾಗಿ ಸಮುದ್ರ ತುಂಬಿಹೋಯಿತೆ?
ನಮ್ಮೂರ ಗಿಡ ಮರ, ಕೆರೆ ಕುಂಟೆ, ಬೆಟ್ಟಗುಡ್ಡ
ಭೂಮಿ ಆಕಾಶ ಬ್ರಹ್ಮಾಂಡ–
ಕಣ್ಣ ನೀಲಿಯೊಳಗೆ ಸೇರಿಕೊಂಡಿದ್ದೇಗೆ?

ಭೂಮಿಗೆ ಬೆಂಕಿ ಬಿದ್ದಾಗೆಲ್ಲ
ಓಡಿ ಬರುವ ಕಡಲು–
ಸೂರ್ಯನಿಂದ ಬೆಳಕ ತಂದು, ಮಣ್ಣಿನಿಂದ
ಕಪ್ಪು ಆಮ್ಮೈನೊಆಸಿಡ್ ತಿಂದು ನೇಯ್ದುಕೊಂಡಿದ್ದೇಗೆ
ತನ್ನ ಸುತ್ತಲು ಜೀವಜಾಲ.

ಕೋರಲ್ ಬಣ್ಣಗಳ, ಮೀನ ಕಣ್ಣುಗಳ
ಗುರುತ್ವಕ್ಕೆ ತಕಥೈ ತಕಥೈ ಕುಣಿವ
ಸಮುದ್ರದಲೆಗಳ ಮೇಲೆ–
ಯಾರು ಹೋಗಿ ಬರುವರು ಯಾರು? ದೇವಲೋಕಕ್ಕೆ
ನೀಲಿ ರಥಗಳಲ್ಲಿ?

ಇಲ್ಲಿದ್ದವರೆಲ್ಲ ಎಲ್ಲಿಗೆ ಹೋಗವರು,
ಇಲ್ಲಿಗೆ ಬಂದವರೆಲ್ಲ ಎಲ್ಲಿದ್ದವರು–
ಬಸ್ಸು ಕಾರು ರೈಲು ವಿಮಾನಗಳು;
ಗಿಡ ಮರ ಕೆರೆ ಕುಂಟೆ ಬೆಟ್ಟ ಗುಡ್ಡಗಳೆಲ್ಲ
ಯಾರು ಬಿಟ್ಟುಹೋದ ಚಿಹ್ನೆಗಳು?



# ಸ್ಪೇಸ್ ಆಂಡ್ ಟೈಮ್

ನಮ್ಮ ನಾಗರೀಕತೆ
ಕೆಲವೇ ಸಕೆಂಡುಗಳ ಹಿಂದೆ ನದಿ ದಡಗಳಲ್ಲಿ
ಚಿಗುರಿದ ಗರಿಕೆ ಹುಲ್ಲು, ಕ್ಯೋಟ್ಯಾಂತರ
ವರುಷಗಳ ನಾಗರೀಕತೆ ಹಾಸಿಕೊಂಡಿದೆ-
ಬೆಳಕ ಅಚ್ಚಿಕೊಂಡ ನಕ್ಷತ್ರಗಳಲ್ಲಿ

ಆಕಾಶಗಂಗೆ ಒಳಕ್ಕೆ
ವೇಗವಾಗಿ ಧಾವಿಸುವ ಸೂರ್ಯಮಂಡಲ,
ಸುತ್ತುಗಟ್ಟಿ ಸಾಗುವ ಬುಧ ಗುರು ಭೂಮಿ...
ಸೂರ್ಯನ ಛೇಡಿಸಿ ಬೂದಿಯಾಗುವುದು ನಿಶ್ಚಿತ;
ಸೂರ್ಯ ಉರಿದುರಿದು ಗುರುತ್ವಾಕರ್ಷಣೆ ಕಳೆದುಕೊಂಡು
ಕಪ್ಪುರಂಧ್ರದಲ್ಲಿ ಸೇರಿಹೋಗುವುದು ಇನ್ನೂ ನಿಶ್ಚಿತ-
ಇದೆಲ್ಲ ನಡೆಯುವುದು ಮಿಲಿಯಾಂತರ-
ಬಿಲಿಯಾಂತರ ವರ್ಷಗಳಲ್ಲಿ ಎನ್ನಬೇಡಿ,
ನಾಳೆಯೇ ನಡೆಯಬಹುದು; ಇಲ್ಲ ಕೆಲವು ನೂರು
ಜ್ಯೋತಿರ್ವರ್ಷಗಳಾದರೂ ಆಗಬಹುದು.
ಇಷ್ಟಕ್ಕೂ ಈ ಬೆಳಕಿನ ಕಿರಣಗಳಿಗೆ
ಒಂದು ಕ್ಷಣಕ್ಕೆ 3 ಲಕ್ಷ ಕಿ.ಮೀ ದೂರ
ಓಡುವಂತೆ ಆಜ್ಞೆ ನೀಡಿದವರ್ಯಾರು?
ಈ ಗಿಡ ಮರ, ಪಕ್ಷಿ ಪ್ರಾಣಿಗಳು;
ಕೆರೆ ಕುಂಟೆ, ಸರೋವರ ಸಮುದ್ರಗಳು-
ಕಲ್ಲು ಬಂಡೆ, ಪರ್ವತ ಶ್ರೇಣಿಗಳು ಕ್ಷಣಿಕವಾದುವು;

ಎಲ್ಲದರ ಮೂಲ ಬಿಗ್‌ಬ್ಯಾಂಗ್ ಸ್ಫೋಟ;
ಅದು ಒಂದಲ್ಲ ಎರಡಲ್ಲ ಸ್ಫೋಟಗೊಂಡವು
ನೂರಾರು... ಮಧ್ಯೆದಲ್ಲಿಯೇ ತಡವರಿಸಿ ನಿದ್ದೆಗೆ ಜಾರಿ
ಮಿಲಿಯಾಂತರ ವರುಷಗಳ ಕೋಶಾವಸ್ಥೆ; ಅನಂತರ
ವಿಶ್ವಕ್ಕೆ ಕಣ್ಣು ನೀಡಿದವು ನಿಧಾನವಾಗಿ ಎಣೆಯಿಲ್ಲದ
ಪೋಟಾನುಗಳು–
ಎಲೆಕ್ಟ್ರಾನ್, ಪ್ರೋಟಾನ್, ನ್ಯೂಟ್ರಾನ್ ಏನು?

ಸ್ಪೇಸ್ ಆಂಡ್ ಟೈಮ್ ಅಂದರೆ ಏನೆಂದು ತಿಳಿಯದೆ
ಇಲ್ಲಿಗೆ ಬಂದು ನಿಂತಿದ್ದೇವೆ ನಾವೀಗ!
ನಾಳೆ ಎಲ್ಲಿಗೋ ಹೋಗಿ ತಲುಪುತ್ತೇವೆ...?
ಕತ್ತಲೆಂದರೆ ಕುಗ್ಗುವ (black hole) ಕೃಷ್ಣರಂಧ್ರಗಳು,
ಬೆಳಕೆಂದರೆ ಹಿಗ್ಗುವ (warm hole) ಬೆಳಕಿನ ರಂಧ್ರಗಳು,
ಆರಂಭ–ಅಂತ್ಯವಿಲ್ಲದ ಬ್ರಹ್ಮಾಂಡ–
ಯಾರಿಗೆ ಏನು ಗೊತ್ತು,
ವಿಜ್ಞಾನ ಒಂದು ಸುಟ್ಟ ಬದನೆಕಾಯಿ;
ಅಂಡ–ಪಿಂಡ ಬೂದಿ ಬ್ರಹ್ಮಾಂಡ.



> ನನ್ನ ದೇಹದ ಒಂದೊಂದು ಕಣವೂ ಒಂದಾನೊಂದು
> ಕಾಲದ ಅಷ್ಟೇ ನಕ್ಷತ್ರಗಳ ಚೂರುಗಳು.
>
> – ಕಾರ್ಲ್ ಸಗನ್

## ಮಣ್ಣು-ಮಳೆ

ಮಳೆಗಾಲ ಬಂತೆಂದರೆ
ಮಣ್ಣಿಗೆ ಮೈತುಂಬಾ ಕೆಲಸ...

ಸಾಗರ ಬಿಸಿ ಏರಿ
ಮೋಡ ಕಟ್ಟಿ ಮಳೆ ಹನಿದರೆ-
ಒಂದೊಂದೆ ಹನಿ ಹೆಕ್ಕಿ ಕೂಡಿಡಬೇಕು ನೆಲದಲ್ಲಿ.
ರೈತನ ಕರೆದು ನೇಗಿಲಿಂದ-
ಬೆನ್ನ ಮೇಲೆ ಗೆರೆ ಎಳೆಸಿ, ವರ್ಷಪೂರ್ತಿ ಬೆಳೆಗೆ
ಗುಟುಕು ನೀರು ಕೊಡಬೇಕು;
ಸಮೃದ್ಧ ಬೆಳೆ ಬೆಳೆದು ಮಣ್ಣಿನ ಮಗನ
ಕಣಜ ತುಂಬಬೇಕು-ಅವನ ಕಣ್ಣೀರ
ಒರೆಸಲು ಯಾರೂ ತಾನೇ ಇರುವರು?

ಹೂವು ಕಾಯಿ ಬೀಳದಂತೆ ಹಗುರವಾಗಿ
ಗಾಳಿ ಬೀಸಬೇಕು; ಉಗುರು ಬೆಚ್ಚನೆ
ಕಿರಣಗಳಿಂದ ಸಮುದ್ರ ಕಾಯಿಸುವಂತೆ
ಸೂರ್ಯನಿಗೆ ಹೇಳಿ ಬರಬೇಕು; ಮೋಡಗಳ
ಸಂತೆಗೋಗಿ ಮಳೆ ತರಬೇಕು.
ಆಹಾರ ಸಂಗ್ರಹಿಸಲು-
ಎಲೆ ಎಲೆಯ ತೊಳೆದಿಡಬೇಕು;
ಗಾಳಿಗೆ ಮೈ ಸವರಿ ಲಾಲಿ ಹಾಡುವಂತೆ ತಿಳಿಸಬೇಕು;
ಬೆಳೆ ನಾಶ ಮಾಡದಂತೆ
ಕ್ರಿಮಿ ಕೀಟಗಳ ಓಡಿಸಬೇಕು.

ಹೂವು ಹೂವ್ವಿಗೂ–
ಬಣ್ಣಗಳ ತುಂಬಬೇಕು–
ಹಾರುವ ಚಿಟ್ಟೆಗಳ ರೆಕ್ಕೆ ಒದ್ದೆಯಾಗದಂತೆ
ನೋಡಿಕೊಳ್ಳಬೇಕು;
ಕೋಗಿಲಿಗೆ ಧ್ವನಿ ಕೊಡಬೇಕು–
ಗಾನ ಗಂಧರ್ವರು ಭೂಮಿಗೆ ಇಳಿದು ಬರಲು
ಆಕಾಶದ ಕೆಳಗೆ ಮಳೆಬಿಲ್ಲು ಬಿಚ್ಚಬೇಕು.
ನದಿಗಳಲ್ಲಿ ನೆರೆ ಬರದಂತೆ–ಮಕ್ಕಳು ಕೆರೆ
ಕುಂಟೆಗಳಲ್ಲಿ ಇಳಿಯದಂತೆ ಗದರಿಕೊಳ್ಳಬೇಕು;
ಕೋಪಗೊಳ್ಳುವ ಗುಡುಗು–ಸಿಡಿಲನ್ನು
ತಹಬಂದಿಯಲ್ಲಿಡಬೇಕು.

ಕಪ್ಪೆಗಳು ವಟಗುಟ್ಟಿ ಮಕ್ಕಳ ನಿದ್ದೆ ಕೆಡಿಸದಂತೆ,
ಎಲ್ಲೆಂದರಲ್ಲಿ ಹಾವುಗಳು ಹರಿದಾಡದಂತೆ–
ಕಾವಲು ಕಾಯಬೇಕು. ಹೀಗೆ ಒಂದೇ ಎರಡೇ
ಹಗಲೂ–ರಾತ್ರಿ ಪುರುಸೊತ್ತೆ ಇಲ್ಲ...

ಮಳೆಗಾಲ ಬಂತೆಂದರೆ
ಮಣ್ಣಿಗೆ ಮೈತುಂಬಾ ಕೆಲಸ...

ಬುದ್ಧಿವಂತರು ನೀರು ಮಾತ್ರ ಕುಡಿಯುತ್ತಾರೆ, ಮಳೆ
ಬರುವವರೆಗೂ ಕೊಡವನ್ನು ಖಾಲಿ ಮಾಡಬೇಡಿ.

## ಕಣಗಿಲೆ ಗಿಡ

ಅಪ್ಪನು ಸತ್ತು
ಅಂದಿಗೆ ಒಂದು ವರುಷ ಕಳದಿತ್ತು,
ಅವನ ಮೇಲೆ ನೆಟ್ಟ
ಕಣಗಿಲೆ ಗಿಡ ಎಲೆ ಹತ್ತು ತೊಟ್ಟಿತ್ತು;
ಅಷ್ಟ ದಿಕ್ಕುಗಳ
ಎಡೆ ಅವನ ಮುಂದಿತ್ತು...
ಭೂಮಿ ಆಕಾರದ ಮುದ್ದೆ ಅನ್ನ,
ಉಪ್ಪು ಕಾರ ಸವರಿದ ಬೇಳೆ, ನುಗ್ಗೆಹೋಳು,
ಅವನಿಗೆ ಪ್ರಿಯವಾದ ಮಾಂಸ,
ಶರಾಬು ಕೂಡ ಅಲ್ಲಿತ್ತು.
ಅವನ ಬರುವಿಗಾಗಿ ಕಾದೆವು ದೂರದಲ್ಲಿ;
ಕಪ್ಪು ಕಾಗೆ ಅಪ್ಪನೆ ಸರಿ, ಹಾರಿಬಂದು
ಕುಕ್ಕಿತು ಕೊಕ್ಕಿನಲ್ಲಿ–
ಎಂತಹ ತೃಪ್ತಿ ಮುಖದಲ್ಲಿ.

ಗುಡುಗು ಸಿಡಿಲು ಮಿಂಚು
ಮಳೆ ಸುರಿಯಿತು ಧಾರಾಕಾರವಾಗಿ
ಒಂದೇ ಸಮನೇ ತಣಿಯುತ್ತಿತ್ತು ಭೂಮಿ.
ಆ ಗಿಡ ಹತ್ತು ಎಲೆಗಳ ಪುಟ್ಟ ಗಿಡ
ಏಕೋ ಏನೋ ನನ್ನೊಳಗೆ ಇಳಿಯುತ್ತಿತ್ತು;
ಒಳಗೊಳಗೆ ಆಳವಾಗಿ ಬೆಳೆಯುತ್ತಿತ್ತು.

> ಜೀವನದಲ್ಲಿ ಒಂದು ಗಿಡ ನೆಡದ ಮನುಷ್ಯ
> ಎಲ್ಲರಿಗಿಂತ ಮುಂಚೆ ಸಾವಿನೆಡೆಗೆ ಸಾಗುತ್ತಾನೆ.
> – ಅಲೆಕ್ಸಾಂಡರ್ ಸ್ಮಿತ್

# ಮಂಗಳನ ಅಂಗಳ

ಇದ್ದವೇ ಮಂಗಳನ ಅಂಗಳದಲ್ಲಿ
ಜೀವಿಗಳು, ಅತಿ ಬುದ್ಧಿ ಜೀವಿಗಳು,
ಟೊಂಗೆ ಟಿಸಿಲು ಹಸಿರು ಉಸಿರು
ಬತ್ತ ಗೋದಿ ಬಯಲುಗಳು.

ಇದ್ದವೇ ಅಲ್ಲಿಯೂ ಗುಡಿ ಗೋಪುರಗಳು
ರಾಜ ಮಹಾರಾಜರ ಅರಮನೆಗಳು
ಬೋಫೋರ್ಸ್ ಹವಾಲಾ ಗೋಮೇವು
ಗಣಿ ಅದಿರು; ನ್ಯಾಯಾಲಯಗಳ ಹಗರಣಗಳು.

ಆಯಿತೇ ಅಲ್ಲೂ ಜನಾಬ ಜಾಸ್ತಿ
ನಡೆಯುತ್ತಿದ್ದವೆ ಕೊಲೆ ಸುಲಿಗೆ ದರೋಡೆ,
ಬಸ್ಸು ರೈಲು ವಿಮಾನ ಅಪಘಾತಗಳು;
ವರ್ಷಕ್ಕೆರಡು ಚಂಡಮಾರುತ ಸುಮಾಮಿಗಳು.

ಇದ್ದರೇ ಅಲ್ಲಿಯೂ ವಿಜ್ಞಾನಿಗಳು
ರಾಸಾಯನ ನ್ಯೂಕ್ಲಿಯಾರ್ ಬಾಂಬುಗಳ
ಸೃಷ್ಟಿಸಿದ ಹಿರೋಶಿಮ ನಾಗಾಸಾಕಿ
ನೆಲಸಮ ಮಾಡಿದ ಮತಿಹೀನರು.

ಗುಡಿಸಿದರೆ ಎಲ್ಲರೂ ಸೇರಿ
ಮಂಗಳನ ಅಂಗಳ, ಇಗೋ
ಗುಡಿಸುತ್ತಿದ್ದೇವೆ ನಾವೂ ಒಗ್ಗಟ್ಟಾಗಿ
ಪೃಥ್ವಿಯ ಅಂಗುಲಂಗುಲ.



> ಹಣ್ಣನ್ನು ತಿನ್ನಬೇಕಾದರೆ ಹೂವನ್ನು ರಕ್ಷಿಸು
> – ಬಲ್ಗೇರಿಯಾ ಗಾದೆ

# ಒಂದು ಗಣಿಯ ಸುತ್ತ

ಒಂದು ಹಳೆ ಗಣಿ ಇದ್ದ ಜಾಗ ಅದು,
ಪುಡಿಯಾದ ಕೈಕಾಲು ತಲೆಯೋಡು
ಸುತ್ತಲೂ ರಾಶಿ ರಾಶಿ–
ಜೀವಧಾತು ಖನಿಜ ಸಂಪತ್ತು,
ಸುತ್ತಲೂ ನಡೆದಿತ್ತು ಪಿಸುಮಾತು ಮೌನ;
ಗತ ವೈಭವದ ಅವಶೇಷಗಳು
ಅಲ್ಲೆಲ್ಲ ಚೆಲ್ಲಿತ್ತು. ಎತ್ತಿ ಹೊರಕ್ಕೆ
ಒಗೆದಿತ್ತು ಬೇರುಗಳ ಆ ಸುರಂಗಗಳು:
ಕುತೂಹಲ ತಡೆಯಲಾಗದೆ
ಹತ್ತಿರ ಹೋಗಿ ಇಣಿಕಿದೆ ಆಳಕ್ಕೆ–
ಕಾಣುತ್ತಿತ್ತು ಬಾವಿ ತೊರೆ ಕಡಲದಾರಿ–
ಒಂದು ಕಲ್ಲೆಸೆದು ಕಾದೆ
ಸದ್ದು ಮರುಕಳಿಸುವುದನ್ನೇ ಆತಂಕದಿಂದ–
ಎದೆಯಲ್ಲಿ ಎಲುಬುಗಳ ಏಣಿ
ಇಳಿದು ಹೋಗಿತ್ತು ಆಳಕ್ಕೆ ಪಾತಾಳಕ್ಕೆ
ಇರುವೆ ಸಾಲು ಸಾಲು; ಯಾರನ್ನೋ
ಕೂಗಿ ಕರೆಯುತ್ತಿತ್ತು ಕೆಳಗಡೆ ಭೂಮಿ,
ಕಾಲುಗಳ ಮೇಲೆ ನಡೆಯುವವರು
ಕೇಳಲಾರರು, ಹಾಗೆ ಶಬ್ದಗಳು.

ಒಳಗೋದರೆ ಹೆಣ ಮೇಲೆ ಬಂದರೆ ಹಣ –
ಕೋಲಾರ ಚಿನ್ನದ ಗಣಿಗಳ ಕಾರ್ಮಿಕರು ತಮ್ಮನ್ನು
ತಾವು ಛೇಡಿಸಿಕೊಳ್ಳುತ್ತಿದ್ದ ಗಾದೆ.

# ಸೂರ್ಯ ಚಂದ್ರರು

ಸೂರ್ಯ ಬೆಳ್ಳಿಯ ತಟ್ಟೆಯಂತೆ
ಚಂದ್ರ ಬೆಣ್ಣೆಯ ಮುದ್ದೆಯಂತೆ, ಯಾವ ಪರ್ವತ
ಜ್ವಾಲಾಮುಖಿಯ ನುಂಗಿ ಮಲಗಿದ್ದನೋ ಸೂರ್ಯ;
ಯಾವ ಕೊಳದಲ್ಲಿ ನೈದಿಲೆಯಾಗಿದ್ದನೋ ಚಂದ್ರ,
ರೊಟ್ಟಿಯ ಚೂರಿನಂತೆ, ಕೊಯ್ದ ಹಣ್ಣಿನ ಹೋಳಿನಂತೆ,
ಚಿನ್ನ ಬೆಳ್ಳಿ ವಜ್ರ ವೈಢೂರ್ಯ ಹೊಳೆಯುವಂತೆ,
ಯಾವ ಕಾಲದಲ್ಲಿ, ಯಾವ ಲೋಕದಲ್ಲಿ, ಯಾವ
ಕಲೆಗಾರನ ಕೈಗಳಲ್ಲಿ ರೂಪುಗೊಂಡ
ತದ್ರೂಪಿಗಳೋ ಇವರು...?
ಬೆಳ್ಳಿ ಕಿರಣಗಳ ಮಾಲೆ ಹಿಡಿದು
ಮೂಡಣದಲ್ಲಿ ಮೂಡಿಬರುವರು ಕಡಲ ಮೇಲೆ,
ಪಡುವಣದಲ್ಲಿ ತಂಪು ಕಿರಣಗಳ ಹಾಸಿಗೆ ಹಾಸಿ
ತೋಳು ಚಾಚಿ ಮಲಗಿಬಿಡುವರು ತಪ್ಪಲಲ್ಲಿ.
ನೋಡುವವರ ಕಣ್ಣುಗಳ ಬೆರಗುಗೊಳಸಿ,
ಸಕಲ ಚರಾಚರಗಳ ಜೀವಗೊಳಸಿ–
ಕಣ್ಣು ಮೂಗು ಬಾಯಿ ಏನಿಲ್ಲದಿದ್ದರೂ
ಎಲ್ಲರಿಗೂ ಕೊಟ್ಟು, ಮುಂದೆ ನಡೆವರು ದಿಕ್ಕುದಿಕ್ಕು;
ಹಗಲು–ರಾತ್ರಿ ಬೈಗೂ ಬೆಳಗೂ ಭೂಮಿಯ
ಪಹರೆ ಕಾಯುವ ಸೂರ್ಯ ಚಂದ್ರರಿವರು.

> ಮೂರು ವಿಷಯಗಳನ್ನು ಮುಚ್ಚಿಡಲಾಗುವುದಿಲ್ಲ.
> ಒಂದು ಸೂರ್ಯ, ಎರಡು ಚಂದ್ರ, ಮೂರು ಸತ್ಯ
> – ಬುದ್ಧ

# ಗಾರ್ಡಿಯನ್

ಸೂರ್ಯನ ಸುತ್ತ
ಸುತ್ತುತ್ತವೆ ಭೂಮಿಯೂ ಸೇರಿ
ಎಂಟು ಗ್ರಹಗಳು, ಅವುಗಳ ಸುತ್ತ
ಹತ್ತಾರು ಉಪಗ್ರಹಗಳು, ಕುಟುಂಬ
ನಿಯಂತ್ರಣ ಪಾಲಿಸದ ಸೂರ್ಯನ
ಅವಿಭಕ್ತ ಕುಟುಂಬ ಸೂರ್ಯಮಂಡಲ.
ನಮ್ಮ ಮನೆಯ ಅಟ್ಟ, ಬೇಲಿಯ ಮೇಲಿರುವ
ಜೇಡರ ಬಲೆ, ಬೆಳಕು ಗಾಳಿ ಹಿಡಿದಿರುವ ಕಲೆ;
ಗ್ರಹ, ಉಪಗ್ರಹ, ಸೂರ್ಯಮಂಡಲ–
ಲಕ್ಷಾಂತರ ಸೂರ್ಯಮಂಡಲಗಳ
ಆಕಾಶಗಂಗೆ ಜಲ್ಲಿಕಲ್ಲುಗಳ ಒಂದು ರಸ್ತೆ,
ಇಬ್ಬನಿ ಹನಿ ಕುಳಿತ ಹಸಿರು ಪಚ್ಚೆಕೆ
ಮೆತ್ತನೆ ಹಾಸಿಗೆ.
ಒಂದು ನಕ್ಷತ್ರದ ಬೆಳಕು–
ಇನ್ನೊಂದು ನಕ್ಷತ್ರ ಮುಟ್ಟಲು
ಬೇಕು ಹಲವು ಕೋಟಿ ಜ್ಯೋತಿರ್ವವರ್ಷಗಳು–
ನಡುವೆ ಕತ್ತಲು ಬೆಳಕಿನ ದೊಂಬರಾಟ,
ಕಪ್ಪುರಂಧ್ರ ಕಿರಣಗಳ ನಡುವೆ ಡೀಥಿಕ್ಕಿ.
ಉತ್ತರ–ದಕ್ಷಿಣ, ಪೂರ್ವ–ಪಶ್ಚಿಮ,
ಉತ್ತರಮುಖಿಗೂ ದಿಕ್ಕು ಕಾಣದೆ ಕಕ್ಕಾಬಿಕ್ಕಿ.
ಅಜ್ಞಾತ ಗಡಿಯಾರಕ್ಕೆ ಕಾಲದ ಕೀ ಎಲ್ಲೋ?

ಒಟ್ಟಿನಲ್ಲಿ ನಮಗೆ ಸೂರ್ಯನೇ ದೊಡ್ಡವನು
ಜೀವಕೋಟಿಗೆ ಮಿಂಚು, ಮಳೆ,
ಕಾಮನಬಿಲ್ಲು ಕೊಟ್ಟವನು
ಇವನೇ ಪೃಥ್ವಿಯ ಗಾರ್ಡಿಯನ್



ವ್ಯೋಮದಲ್ಲಿ ಎಲ್ಲವೂ ಹಾರಾಡುತ್ತಿವೆ,
ಭೂಮಿಯೂ ಸೇರಿ.

# ಹಕ್ಕಿಗಳಿಗೆ ವೀಸಾ ಕೊಟ್ಟವರ್ಯಾರು

ತಲೆ ಮೇಲೆ ಗ್ರೀನ್‌ವಿಚ್ ಪಟ್ಟಿ,
ಎರಡು ಹುಣ್ಣಿಮೆ ಕಣ್ಣುಗಳು,
ರೆಕ್ಕೆ ಪೂರ್ವ ಪಶ್ಚಿಮ ದಿಕ್ಕುಗಳು-
ಧ್ರುವಗಳ ಅಣಕಿಸುವ ಬಾಲದೊಂದಿಗೆ
ಕಣ್ಣುಗಳಲ್ಲಿ ಸೂರ್ಯನ ಬೆಳಕ ತುಂಬಿ,
ದಿಕ್ಕುಗಳಿಗೆ ಹಾರುವ ಹಕ್ಕಿಗಳ
ರೆಕ್ಕೆಗಳಲ್ಲಿ ಜಿಪಿಎಸ್ ಇಟ್ಟವರ್ಯಾರು?

ಭೌಗೋಳೀಕ ಗಡಿಗಳಿಲ್ಲದೆ
ಕಾಲ ದೇಶಗಳ ಕೊಕ್ಕಿನಲ್ಲಿಡಿದು
ಗಾಳಿ ಬೆಳಕಿನೊಳಗೆ ತೂರಿ-
ಸಮಭಾಜಕ ಆಚೆ ಇಚೆ, ಉದ್ದಕ್ಕೂ-
ಉತ್ತರ ದಕ್ಷಿಣ ಧ್ರುವಗಳವರೆಗೂ;
ಹವಾಮಾನ ವೈಪ್ಯರೀತಿಗಳ ಮೀರಿ
ಸಾವಿರಾರು ಕಿ.ಮೀ. ದೂರ
ಒಂದೇ ಸಮನೇ ಹಾರುವ ಹಕ್ಕಿಗಳ
ಜುಟ್ಟಿನಲ್ಲಿ ಉತ್ತರಮುಖಿ ಇಟ್ಟವರ್ಯಾರು?

ನಿತ್ಯ ಹರಿದ್ವರ್ಣ ಕಾಡುಗಳ ನೋಡುತ್ತ-
ಮರುಭೂಮಿಗಳ ಮೇಲೆ ಹಾರುತ್ತ,
ಹಿಮಚ್ಛಾದಿತ ಪರ್ವತ ಶ್ರೇಣಿಗಳ ದಾಟಿ ಹೋಗುತ್ತ;
ಪರಾಗ ಸ್ಪರ್ಶ, ಬೀಜ ಪ್ರಸಾರ ಮಾಡುವ
ಹಕ್ಕಿಗಳು ಯಾವ ಗುರುಕುಲದಲ್ಲಿ
ವಿದ್ಯಾಭ್ಯಾಸ ಮಾಡಿದವು?

ಆಹಾರ ಹುಡುಕುತ್ತ-
ಜಲಚರ, ಕೀಟಗಳ ಕುಕ್ಕುತ್ತ
ಹಣ್ಣು ಹಂಪಲಗಳ ತಿನ್ನುತ್ತ
ಹಿತಕರ ಹವೆ ಅನುಭವಿಸುತ್ತ
ದೇಶ ಕಾಲ ನಿಲ್ದಾಣಗಳಲ್ಲಿ ವಿಹರಿಸುತ್ತಾ
ಗೂಡು ಕಟ್ಟಿ ಸಂತಾನ ವೃದ್ಧಿ ಮಾಡುತ್ತ
ಕಳ್ಳಕಾಕರು, ಬೇಟೇಗಾರರಿಂದ
ಮರಿ ಹಕ್ಕಿಗಳ ರಕ್ಷಿಸುತ್ತ ದೇಶ ವಿದೇಶ
ಸುತ್ತಿ ಬರಲು ಹಕ್ಕಿಗಳಿಗೆ
ವೀಸಾ ನೀಡಿದವರ್ಯಾರು?



ಜಿಪಿಎಸ್ : ಗ್ಲೋಬಲ್ ಪೊಸಿಶನಿಂಗ್ ಸಿಸ್ಟಮ್.

ಮಕ್ಕಳನ್ನು ಸಾಧ್ಯವಾದಷ್ಟು ಹೆಚ್ಚು ಕಾಲ ಆಡಿಕೊಳ್ಳಲು ಬಿಟ್ಟು ಬಿಡಿ.
ಮುಂದೆ ಅವರ ಬದುಕು ಹೇಗಿರುತ್ತದೊ ಯಾರಿಗೆ ಗೊತ್ತು.
– ಎಚ್.ಡಬ್ಲ್ಯೂ. ಲಾಂಗ್‌ಫೆಲೊ

# ಥರ ಥರ ವೈರಸ್ಸು

ಅಮ್ಮಾ-
ತುಂಬಾ ಬಳಲಿದ್ದೇನೆ ಈ ಹೊತ್ತು
ನಿನ್ನ ಮಡಿಲಲ್ಲಿ ಮಲಗುವೆ ಕೈತುತ್ತು ನೀಡಿ
ಜೋಗುಳ ಹಾಡಮ್ಮ.
ವಿಟಮಿನ್ಸ್ ಮಿನರಲ್ಸ್ ಪೌಷ್ಠಿಕ ಎಂದು
ಏನೇನೋ ತಿಂದು ತೇದೋಗಿದೆ ನಾಲಿಗೆ,
ಹೊಟ್ಟೇಲಿ ಹುಣ್ಣು, ಮೆದುಳಲ್ಲಿ ಹೃದಯ,
ಸ್ಟಿರಾಯ್ಡ್ ಚುಚ್ಚಿಕೊಂಡು ಹುಣ್ಣಾಗಿವೆ
ಮಾಂಸಖಂಡಗಳು,
ವಯಾಗ್ರ ತಿಂದು ಬೆಂಡಾಗಿದೆ ದೇಹ;
ಸಂದಿಗೊಂದಿಗಳಲ್ಲೆಲ್ಲ ಬೆನ್ನತ್ತಿದೆ ಎಚ್‌ಐವಿ ಏಯ್ಡ್ಸ್.

ಸಾವಿರ ಜನರ ಬಡತನ
ಒಬ್ಬನ ವೈಭವವಾಗಿದೆ, ಮುಗಿಸಲು ಇದನ್ನು
ಎಲ್ಲಿಂದ ಅಗೆಯಬೇಕು?
ವೇದ ಉಪನಿಷತ್ತುಗಳಿಂದಲೇ,
ರಾಮಾಯಣ, ಮಹಾಭಾರತದಿಂದಲೇ,
ಧರ್ಮಾಂದ ಮಾನವನ ಹುಟ್ಟಿನಿಂದಲೇ?

ತಾಯಂದಿರು ಮೊಲೆ ಹಾಲು ಉಣಿಸುವುದ ನಿಲ್ಲಿಸಿ
ತಿನ್ನಿಸುತ್ತಿದ್ದಾರೆ ಮಕ್ಕಳಿಗೆ ಬೇಬಿಫುಡ್ಡ್,
ಕುಡಿಸುತ್ತಿದ್ದಾರೆ ಪೆಪ್ಸಿ ಕೋಕೋಕೋಲಾ.
ನಗರಗಳು ಬರಬರ ಬೆಳೆದು-

ರಸ್ತೆಗಳು ಅಡ್ಡಾದಿಡ್ಡಿ ತಿರುಗುತ್ತಿವೆ ಗೂಳಿಗಳಂತೆ;
ತುಸುವೆ ಯಾಮಾರಿದರೂ ಅಮಲೇರಿದ ವಾಹನಗಳು
ಕೆಳಕ್ಕೆ ಕೆಡವಿ, ಕೈಕಾಲು ಕೊಡಲಿನ ಮೇಲೇರಿ
ಸಾಗುತ್ತವೆ ಮುಂದಿನ ರಸ್ತೆಗೆ.

ತೆರೆದೇ ಇವೆ ರಾತ್ರಿ ಹಗಲು
ಕರುಳು ಹೃದಯ ಮೆದುಳು ಫ್ರೈಮಾಡಿದ
ಚಾಕನಾ ಅಂಗಡಿಗಳು,
ಜಗಮಗಿಸುವ ಕ್ಲಬ್ಬು ಡಿಸ್ಕೊತೆಕ್ಕುಗಳು,
ಬಾರು ರೆಸ್ಟಾರೆಂಟುಗಳು.

ಕಂಪ್ಯೂಟರ್ ಮೆದುಳಲ್ಲಿ ಥರಥರ ವೈರಸ್ಸು;
ಸುತ್ತಲೂ ಅತ್ಯಾಧುನಿಕ ಶಸ್ತ್ರಾಸ್ತ್ರಗಳು;
ಅಮ್ಮಾ-
ತುಂಬಾ ಬಳಲಿದ್ದೇನೆ ಈ ಹೊತ್ತು
ನಿನ್ನ ಮಡಿಲಲ್ಲಿ ಮಲಗುವೆ ಕೈತುತ್ತು ನೀಡಿ
ಜೋಗುಳ ಹಾಡಮ್ಮ.

ಬುದ್ಧಿ ಇಲ್ಲದ ಮೆರಸ್ಸು ತನ್ನ ಆಶ್ರಯಧಾತನನ್ನು ಕೊಂದರೆ,
ಬುದ್ಧಿವಂತ ಮೆರಸ್ಸು ಅಲ್ಲಿ ಬದುಕಿರುತ್ತದೆ.
– ಜೇಮ್ಸ್ ಲಿವ್‌ಲಾಕ್

# ಸೇನಸ್ ನೋಡ್

ಆಸ್ಪತ್ರೆಯಲ್ಲಿ ಸದಾ ಓಟ...
ರೋಗಿಯ ಹೊತ್ತು ಸಾಗುವ ರುಗ್ಣಗಾಡಿ,
ಕೈಯೇ ಕಾಲಾಗಿ, ಕಾಲೇ ಕೈಯಾಗಿ
ಚಲಿಸುವ ಲಬ್-ಡಬ್ ಹೃದಯ
ಸಾವಿರಾರು ಮೈಲಿಗಳ ಉದ್ದ,
ಸಣ್ಣ-ದಪ್ಪ ರಕ್ತನಾಳಗಳ ಒಡೆಯ.

ಎರಡು ಹೃತ್ಕರ್ಣಗಳ ಒಂದು ಮಿಡಿತ,
ಇನ್ನೆರಡು ಹೃತ್ಕರ್ಣಗಳ ಮತ್ತೊಂದು ತುಡಿತ
ಕೂಡಿದಾಗ ಸಂಪೂರ್ಣ ಜೀವ ಬಡಿತ;
ಪ್ರತಿ ಕ್ಷಣವೂ ಜೀವಿಸುವ ಅದರ ಕುಣಿತ
ಇದಕ್ಕೆಲ್ಲ ಕಾರಣ ಹೃದಯದಲ್ಲೇ ಇರುವ
ಶಕ್ತಿಸ್ಥಾವರ 'ಸೇನಸ್‌ನೋಡ್'
ಎಂಬ ಸಣ್ಣ ಉಪಕರಣ.

ಆಪತ್ತು ಬಂದಾಗ ಹೃದಯಕ್ಕೆ
ಹೃದ್ರೋಗಿಯ ಮಲಗಿಸಿ ಒತ್ತಿದರೆ ಸ್ವಿಚ್ಚು
ತೆರೆದುಕೊಳ್ಳುತ್ತದೆ ಜೈವಿಕಯಂತ್ರದ
ಅದ್ಭುತ ವಿಸ್ಮಯ, ಜೀವ ಜೀವಿಯ
ಆಕುಂಚನ-ವಿಕಸನ, ನರನಾಡಿಗಳಲ್ಲಿ
ರಕ್ತಾಭಿಸರಣ, ವಿಶ್ವ ಪರಿಭ್ರಮಣ;
ಕೊಬ್ಬು ಕೊಲೆಸ್ಟ್ರಾಲ್ ಎಷ್ಟೊಂದು ಬ್ಲಾಕುಗಳು?

ಸಾವರಿಸಿಕೊಂಡ ವೈದ್ಯರು
ಕ್ಷಣ ಹೊತ್ತು ಕೈಗೆ ನಾಡಿ ಸಿಕ್ಕವರ ಕುರಿತು–
'ತೆಗೆದುಕೊಳ್ಳಬೇಕು ಔಷಧಿಯನ್ನು ಮರೆಯದೇ;
ತೇವಾದ ಹುಲ್ಲಿನ ಮೇಲೆ ಬರಿಗಾಲು ನಡಿಗೆ ಉತ್ತಮ,
ಅತಿ ಆನಂದ, ಹೆಚ್ಚು ದುಃಖ, ಉಪ್ಪುಕಾರ ಎಲ್ಲವೂ
ಇರಲಿ ಕಡಿಮೆ, ಉದ್ರೇಕ, ಪ್ರೀತಿಯ ಅಪ್ಪುಗೆ
ಕೂಡ ತರಬಲ್ಲದು ಅಪಘಾತ, ಹೃದಯಘಾತ
ಚಿಂತಿಸದಿರಿ'– ಎನ್ನುವರು.

ಮುಂದುವರಿದು–
'ಕೈಮೀರಿದರೆ ಕತ್ತಿಯಿಂದ ಹಣ್ಣನ್ನು
ಹೋಳು ಮಾಡುವಂತೆ ಹೃದಯದ ಕಸಿ ಸರಾಗ,
ಖರ್ಚು ಕೂಡ ಕಡಿಮೆ ಎರಡು ಮೂರು ಲಕ್ಷ'
ಹೃದ್ರೋಗಿಗಳ ಐಸಿಯೂನಲ್ಲಿಟ್ಟು
ಕೃತಕ ಗಾಳಿ ಕೊಟ್ಟರೂ ಕ್ಷಣಗಳಲ್ಲೇ ಕೈಗೆ ಸಿಗದೇ
ತೇಲಿಹೋದವರು, ನುಡಿನುಡಿಯುತ್ತಲೇ
ಸುಮ್ಮನಾದವರೂ, ಕೂತ ಕುರ್ಚಿಯಲ್ಲೇ
ಇನ್ನಿಲ್ಲವಾದವರು, ನಕ್ಕುನಕ್ಕು ಪಕ್ಕನೆ ಶ್ವಾಸ
ಕಳೆದುಕೊಂಡವರು ಶಾಶ್ವತ ನಿದ್ದೆಯಲ್ಲಿ
ಲೀನವಾದವರು ಎಷ್ಟೋ ಮಹಾನುಭಾವರು.



> ಕಣ್ಣಿಗೆ ಕಾಣದ್ದನ್ನು ಕೆಲವೊಮ್ಮೆ ಹೃದಯ ನೋಡುತ್ತದೆ.
> – ಜಾಕ್ಸನ್ ಬ್ರೌನ್

# ಒಂದು ಅಣುಬಾಂಬು

ಇಡೀ ಭೂಮಂಡಲವನ್ನೇ
ನೂರಾರು ಸಲ ಸುಟ್ಟು ಬೂದಿ ಮಾಡುವ
ರಾಸಾಯನಿಕ ಜೈವಿಕ ಅಣ್ವಸ್ತ್ರ ಬಾಂಬುಗಳು
ಬಲಿಷ್ಠ ರಾಷ್ಟ್ರಗಳ ದಾಸ್ತಾನು.

ಕಣ ಕಣ ಕೊಲ್ಲುವ ಈ ಬಾಂಬುಗಳು
ಎಲ್ಲಿ ಯಾವಾಗ ಬೀಳಬಹುದು?
ಬಿದ್ದ ಸ್ಥಳ ಹೇಗೆ ತಲ್ಲಣಿಸಬಹುದು?
ಹಿರೋಶಿಮ ನಾಗಾಸಾಕಿ ಇಥೋಪಿಯ
ಇರಾಕ್ ಕೊಸೊವೊ ಚಿ ಚಿನ್ಯ ಶ್ರೀಲಂಕಾ
ಜೀವಜನಾಂಗ ಸುಟ್ಟ ಕರಕಲು–

ಯುರೇನಿಯಂ ಥೋರಿಯಂ ವಿಕಿರಣ–
ಚರ್ಮ ಮೆದುಳು ಗರ್ಭತೂರಿ ಕಣ್ಣು ಉರಿಕಾರಿ
ಕಾಲಿಗೆ ಗ್ಯಾಂಗ್‌ರಿನ್ ಏರಿ–
ಕರುಳು ಬಸಿದಿದೆ ಒಳಗೊಳಗೆ ಕಳ್ಳಿಹಾಲು.

ಕಾದು ಕುಳಿತ ಹದ್ದುಕೊಕ್ಕಿನ ಬಾಂಬುಗಳು
ತಲೆಕೆಟ್ಟ ಒಂದು ರಾಷ್ಟ್ರ ಅಧ್ಯಕ್ಷನ ಆಜ್ಞೆಗೊ ಇಲ್ಲ
ಮಿಲಿಟರಿ ಮುಖ್ಯಸ್ಥನ ತೆವಲಿಗೊ ಹಾರಿಹೋಗಿ
ಹೊಲಗದ್ದೆ ಹಸಿರು ದಟ್ಟಕಾಡು ಜನವಸತಿ
ತಲೆತಲಾಂತರ ಮನುಷ್ಯ ಸೃಷ್ಟಿಸಿದ–

ಜಗತ್ಪ್ರಸಿದ್ಧಿ ಆಕೃತಿಗಳ ನಾಶ ಮಾಡಬಹುದು, ಇಲ್ಲ!
ಹಾಲುಗಲ್ಲದ ಅಸುಳೆ ಮೇಲೆ ದಿಢೀರನೆ ಎರಗಬಹುದು.
ಮಠ ಮಸೀದಿ ಚರ್ಚು ಗುರುದ್ವಾರ
ಬುದ್ಧ ಬಸವ ಏಸು ಎಷ್ಟೋ ಮಹಾತ್ಮರು
ಸೃಷ್ಟಿಸಿದ ಲಕ್ಷಾಂತರ ಕರುಣೆ ಮಂದಿರಗಳು
ಚಿಟಿಕೆಯಲ್ಲಿ ಬೂದಿಯಾಗಿ ಹಾರಿಹೋಗಬಹುದು
ಆಕಾಶಕ್ಕೆ-
ಪೃಥ್ವಿಯ ಮೇಲೆ ಕೇವಲ
ವಿರಾಟ ಬ್ರಹ್ಮಾಂಡ ಬೂದಿ ಮಾತ್ರ ಉಳಿಯಬಹುದು,
ಕೋಟ್ಯಾಂತರ ವರ್ಷಗಳ ಹಿಂದಿನ ಸ್ಮಶಾನ ಮೌನ
ಮತ್ತೆ ಎಲ್ಲೆಲ್ಲೂ ಆವರಿಸಬಹುದು.

ಶಾಂತಿಗಾಗಿ ನಡೆಸುವ ಯಾಗ ಯಜ್ಞಗಳು,
ಬುದ್ಧಂ ಶರಣಂ ಗಚ್ಛಾಮಿ... ಶಾಂತ ಮಂತ್ರ,
ಚರ್ಚ್‌ನ ಪಾದ್ರಿಗಳು, ಮಸೀದಿಯ ಮುಲ್ಲಾಗಳು
ನಮ್ಮನ್ನೇ ಸೃಷ್ಟಿಸಿದನೆನ್ನುವ ಬ್ರಹ್ಮನು
ತಡೆಯುವನೇ ಈ ಬಾಂಬುಗಳ?

ಗನ್ನು, ಬಾಂಬುಗಳು, ರಾಕೆಟ್ಸ್, ಯುದ್ಧ ನೌಕೆಗಳು
ಮನುಷ್ಯನ ಹೇಡಿತನವನ್ನು ಪ್ರದರ್ಶಿಸುತ್ತವೆ.

– ಲಿಂಡನ್ ಬಿ ಜಾನ್‌ಸನ್

# ನೀನು ಹೊರಟುಹೋದ ನಂತರ

ನಡುರಾತ್ರಿ ನೀನು ಹೊರಟುಹೋದೆ
ಬಾಗಿಲನ್ನು ತೆರೆದೇ ಇಟ್ಟು, ಬೇಡವೆಂದರೂ
ಎದೆಯ ಮೇಲೆ ಹೆಜ್ಜೆ ಇಟ್ಟು,
ಒಳ ನುಗ್ಗಿದ ತಂಗಾಳಿ ಸುತ್ತುತೊಡಗಿತ್ತು–

ಸುತ್ತಲು; ಸುತ್ತುವಾಗ ಅದರ ಮೂಗು
ಬಡಿದುಕೊಳ್ಳುತ್ತಿತ್ತು ಕೋಣೆಯ ಗೋಡೆಗಳಿಗೆ
ಬಟ್ಟಲಲ್ಲಿ ನೋವು, ಮಧು
ತುಂಬಿ ಕಾಯುತ್ತಿತ್ತು ಇರುಳಲ್ಲಿ ಅರ್ಥಂಬರ್ಥ–

ಬೆಳದಿಂಗಳು ಹೊಂಚಿ ಇಣುಕುತ್ತಿತ್ತು
ಕುಡಿ ಕಣ್ಣುಗಳಲ್ಲಿ, ತುಟಿ ನೇತ್ರ ಅಸ್ತ
ಹೃದಯ ಪಾದ ಎಲ್ಲವೂ ಒಂಟಿಯಾಗಿದ್ದವು,
ವಿರಕ್ತಿಯ ವಿರಹದಲ್ಲಿ ತಲೆದಿಂಬು ಹಾಸಿಗೆ–

ಮಂಚ ವಿರಹ ಅನುಭವಿಸುತ್ತಿದ್ದವು.
ಇಡೀ ರಾತ್ರಿ ಗಿಡದಲ್ಲಿ ಪ್ರೀತಿ ಪಡೆದ ಮೊಗ್ಗು
ಬೆತ್ತಲಾಗುತ್ತಿತ್ತು ಸೂರ್ಯನ ಬೆಳಕಿನಲ್ಲಿ.
ಸುಗಂಧೋಪಗಂಧ ಮಕರಂದ ಹೀರಲು–

ಕಾತುರದಿಂದ ಹಾರಾಡುತ್ತಿದ್ದವು ಬಣ್ಣಬಣ್ಣದ
ದುಂಬಿಗಳು.
ಹೃದಯದ ಬಾಗಿಲು ತೆರೆದೇ ಇತ್ತು;
ಹೋದವಳಿಗೆ ಹೇಗೆ ತಿಳಿಸಲಿ ಪ್ರೀತಿಯ ದಾರಿ;
ಹೃದಯದ ದಾರಿ ಮರೆತೇಬಿಟ್ಟಿತೆ ಜೀವ.



ಪ್ರೀತಿ ಎಲ್ಲವನ್ನು ಗೆಲ್ಲುತ್ತೆ. ಆದರಿಂದ
ಪ್ರೀತಿಗೆ ಶರಣಾಗಿಬಿಡೋಣ

# ಎಲೆ ನಾಗವಲ್ಲಿ

ಎಲೆ ನಾಗವಲ್ಲಿಯ ಬೆನ್ನು ತಿರುಗಿಸಿ
ಸುಗಂಧ ದ್ರವ್ಯ ಸುಣ್ಣ ಲೇಪಿಸಿ;
ತುರಿದ ಅಡಿಕೆ ಯಾಲಕ್ಕಿ ಕೇಸರಿ
ಜಾಜಿ ಪತ್ರೆ ಗುಲಕಂದ ಸಿಹಿಚಟ್ನಿ

ರಜತ ಸುವರ್ಣ ಆರ್ಕವು ಪೂಸಿ;
ಸೊಗಸಾದ ಆಕಾರಕ್ಕೆ ಮಡಿಚಿ,
ಲವಂಗದಿಂದ ತುಟಿಯ ಚುಚ್ಚಿ, ಬನಾರಸ್
ಕಲಕತ್ತಾ ಅಂಬಾಡಿ ಪಾನ್‌ಬೀಡಾ...

ಎಂದು ಬೀಡಾವಾಲಾ ಕೈಗಿತ್ತಾಗ–
ಇಲ್ಲ! ಪ್ರಿಯತಮೆ ತನ್ನ ಮೆಹಂದಿ
ಹಚ್ಚಿದ ಬೆರಳುಗಳಲ್ಲಿ ಚುಚ್ಚಿ,
ಪ್ರಿಯಕರನ ತುಟಿಗಿಟ್ಟಾಗ–

ತಾಂಬೂಲ ಕವಳ ನಾಲಗೆಯ ಜೊತೆ
ಹೊರಳಿ ಉರುಳಿ ಹಲ್ಲು ದವಡೆ ದಾಟಿ,
ತುಟಿ ಬಾಯಿ ಕೆಂಪೇರಿ, ಮೈಮನಗಳಿಗೆ
ಅದರದೆ ಅನುಭವ ಇಂದ್ರಿಯಗಳಿಗೆ;

ಅಷ್ಟ ಸೌಖ್ಯಗಳಲ್ಲಿ ವೀಳ್ಯ ಸೇವನೆ
ಒಂದು ಸುಖಸೌಖ್ಯ, ಕೆಂಪು ತುಟಿಗಳ
ಮಧುರ ಮಿಲನ ಹೆಣ್ಣು–ಗಂಡು
ನಡುವೆ ವೀಳ್ಯದ ರಾಯಭಾರಿ.



# ಪ್ರವಾಹ

ಅಗಾಧ ಪ್ರವಾಹದಿಂದ ಅನಾಥ
ಬಿದ್ದಿತ್ತು ಒಂದು ಬುರುಡೆ ತಲೆಯೋಡು
ಹುಡುಕುತ್ತ ತನ್ನ ಅಸ್ತಿತ್ವದೋಡು.

ಗಾಳಿಯ ಉಬ್ಬಸ ಉಬ್ಬಿ
ಮರಗಿಡಗಳು ದೂರ ನಿಂತು ನೋಡಿತ್ತು-
ಭೀತಿ ಒಳಗೊಳಗೆ ಉಕ್ಕಿ ಹರಿದಿತ್ತು.

ಭಗ್ನಾವಶೇಷಗಳು ಉದ್ದಕ್ಕೂ ಹರಡಿ
ಯುಗ ಯುಗದ ಬೆಳಕು ಕತ್ತಲು
ಅಲ್ಲೆಲ್ಲ ಎರಚಾಡಿತ್ತು.

ಮೂಳೆ ಚಕ್ಕಳ ಹರಿದು ಬಿಳಿ ಕೆಂಪು
ತೇಪೆಯಾಕಿದ ತೋರಣಗಳು
ನೀಲಿ ಪರದೆಯ ಉದ್ದಗಲಕ್ಕೂ ಅಂಟಿತ್ತು.

ಅಗಾಧ ಪ್ರವಾಹಕ್ಕೆ ಮತ್ತೆ
ಅದು ಎಂದಿನಂತೆ ಕಾದಿತ್ತು.

# ಬಂಗಾರದ ಕಣ್ಣುಗಳ ಹುಡುಗ

ಚುಮು ಚುಮು ಕಿರಣಗಳ
ಸೂರ್ಯ ಉದಯಿಸುವ ಹೊತ್ತು,
ಹಕ್ಕಿ, ನಾವೆ, ನಕ್ಷತ್ರಗಳು ಕಡಲಿಗೆ
ಇಳಿಯುವ ಹೊತ್ತು.
ನೋಡುವವರ
ಕಣ್ಣುಗಳ ನೀಲಿ ಕಡಲಿಗೆ ಬಿದ್ದು ಸಪ್ತ
ಸಮುದ್ರಗಳು ಮಡುಗಟ್ಟಿ ಕಪ್ಪೆ ಚಿಪ್ಪಿನ
ಒಳಗೆ ಮುತ್ತು ಸೇರಿಕೊಳ್ಳುವ ಹೊತ್ತು.

ಬೆಳ್ಳಂಬೆಳಗ್ಗೆ-
ಬಂಗಾರದ ಕಣ್ಣುಗಳ ಹುಡುಗ ಬರುತ್ತಾನೆ-
ದೋಣಿಯ ತುಂಬಾ ನೂರೆಂಟು ಕನಸುಗಳ
ಕಡಲ ಚಿತ್ತಾರ ತುಂಬಿಕೊಂಡು
ಹಾಯುತ್ತಾನೆ ಸುಮುದ್ರವೆಲ್ಲ.

ತೆರೆಗಳು ಒಂದರ ಮೇಲೊಂದು
ಸವಾರಿ ಮಾಡಿ ಕಡಲ ಅಂಚಿಗೆ
ಬಿಟ್ಟುಹೋಗುತ್ತವೆ ಕಾಲದ ಉಂಗುರಗಳನ್ನು
ಸಂಧ್ಯಾಕಾಲದ ಕಣ್ಣುಗಳ ಸುತ್ತ.
ಆಳ ಕಡಲಾಳದಲ್ಲಿ
ಚರಾಚರಗಳೆಲ್ಲ ಸ್ಥಾವರವಾಗಿ ಮುತ್ತು, ಹವಳ
ಪಚ್ಚೆಯಾಗಿ ಹೊಳೆಯುತ್ತವೆ-
ಸೂರ್ಯನು ದಿನವಿಡೀ ದುಡಿದ ಬಾನಲ್ಲಿ.

ಹಗಲು ರಾತ್ರಿ–
ತೆರೆಗಳ ಹೊಡೆತಕ್ಕೆ ಸಿಕ್ಕಿ ನಲುಗಿದ
ಕಪ್ಪೆ ಚಿಪ್ಪು, ಶಂಖುಹುಳ ಓಡಿಹೋಗಿ ದಡ ಸೇರಿದರೂ
ಕೇಳಿಬರುತ್ತದೆ ಅವುಗಳ ಕಿವಿಗಳಲ್ಲಿ
ಭೀಕರ ಸುನಾಮಿ ತೆರೆಗಳು.

ಸಾಯಂಕಾಲ –
ಬಂಗಾರದ ಕಣ್ಣುಗಳ ಹುಡುಗ ತೊಳೆಯುತ್ತಾನೆ
ದೋಣಿಯ ತುಂಬ ಕನಸುಗಳ ಕಡಲ ಚಿತ್ತಾರ.



ಸೂರ್ಯ ಎಲ್ಲರ ಕಣ್ಣಲ್ಲೂ ಕಾಣುತ್ತಾನೆ.

# ಬೈಜಿಂಗ್ ಬುದ್ಧ

ಭೂಲೋಕಕ್ಕೆ ಅವನೊಬ್ಬನೆ ಬುದ್ಧ
ಇನ್ನಿಲ್ಲದಂತಹ ಭಾಗ್ಯವಂತ
ಹೆಸರು ಸಿದ್ಧಾರ್ಥ,
ಊರು ಕಪಿಲವಸ್ತು, ತಂದೆ ಶುದ್ಧೋಧನ
ತಾಯಿ ಮಹಾಮಯಾದೇವಿ
ಪತ್ನಿ ಯಶೋಧರೆ.



ಒಂದು ಹೂವಿನ ವಿಸ್ಮಯ ಬಣ್ಣಗಳನ್ನು ನೋಡಿದರೆ ಸಾಕು,
ನಮ್ಮ ಜೀವನವೇ ಬದಲಾಗಬಹುದು.

– ಬುದ್ಧ

# ಗ್ರೇಟರ್ ಬೈಜಿಂಗ್ ಮಧ್ಯೆ

ಆಕಾಶ ಕೋಲುಗಳ ನಡುವೆ
ಹಳೆ ಕಾಲದ ಪಗೋಡಾ ನಿಂತಿದೆ ಶಾಂತವಾಗಿ,
ನೂರಾರು ಋತುಗಳ ನೋಡಿರುವ ಗೋಡೆ
ಮೆತ್ತಗಾಗಿದೆ ಕಮ್ಯುನಿಷ್ಟರ ಮುಷ್ಠಿ ಹಿಡಿತದಲ್ಲಿ–
ಪೂರ್ವ ದಿಕ್ಕಿನ ಹೆಬ್ಬಾಗಿಲು ಮೇಲೆ
ಕೈಯಲ್ಲಿ ಕತ್ತಿ, ಮುಖದಲ್ಲಿ ಕೋರೆ ಹಲ್ಲು,
ಕೆಂಪು ಕಣ್ಣುಗಳ ದೃಢಕಾಯ ದ್ರಾವಿಡ ದೇಶದ
ದ್ವಾರಪಾಲಕರು; ಬುದ್ಧನ ಜೋಪಾನ ಮಾಡುತಿಹರು.
ಹೇಗೆ ಬಂದರು ಇವರು ಇಲ್ಲಿಗೆ ಗೋಡೆ ಮಹಾಗೋಡೆ ದಾಟಿ;
ಪಗೋಡ ಮುಂದೆ ವಿಶಾಲ ಪ್ರಾಂಗಣ
ಅಮೃತ ಶಿಲೆಯಲ್ಲಿ ಚೀನಿಯರ ಹನ್ನೆರಡು ರಾಶಿಫಲ
(ಚೀನಿಯರಿಗೆ ಲೂನಾರ್, ಭಾರತೀಯರಿಗೆ
ಸೋಲಾರ್ ಕ್ಯಾಲಂಡರ್) ದಂತೆ
ಹನ್ನೆರಡು ಪ್ರಾಣಿಗಳು ನಾಯಿಯಿಂದ–ಕೋತಿಯವರೆಗೆ.
'ಕೋತಿ ನಕ್ಷತ್ರದಲ್ಲಿ ಹುಟ್ಟಿದವರು ಭಾರಿ ನಾಟಿ,
ನಾಯಿ ನಕ್ಷತ್ರದಲ್ಲಿ ಹುಟ್ಟಿದವರು ಭಾರಿ ಪೈಪೋಟಿ'
ಡಾ.ವಾಂಗ್ ವಿವರಕ್ಕೆ ಎಲ್ಲರೂ ನಕ್ಕು
ಮೆಟ್ಟಿಲೇರಿ ಮೇಲಕ್ಕೆ ಹೋದರೆ ವಿಶಾಲ ಭವನ
ಒಳಗೆ ಮಹಾಭಾರತದ ಪಾತ್ರಗಳಂತೆ
ಚಿತ್ರ ವಿಚಿತ್ರ ಧಿರಿಸುಗಳು...
ಅನತ್ತ ಬುದ್ಧ, ನಗುವ ಬುದ್ಧ, ಅರಹಂತ,
ಬೋಧಿಸತ್ತ, ತಥಾಗತ, ಸಮ್ಮಾ–ಸಂಬುದ್ಧ,
ಗೌತಮ ಬುದ್ಧ ಎಲ್ಲೆಲ್ಲೂ ಬುದ್ಧರೆ ಸಾಗರದಂತೆ.

ಕರುನಾಳು ಭೂಮಿ ತಾಯಿಯೇ
ಬುದ್ಧನ ರೂಪ ಪಡೆದು, ಪ್ರೀತಿ ಪ್ರೇಮ ಭ್ರಾತೃತ್ವ
ಎಲ್ಲವನ್ನೂ ಹೇಳಿ ಹೋಗಲು
ಬಂದಿದ್ದಳೇ ನಮ್ಮಲ್ಲಿಗೆ?

ನಿಮ್ಮ ಮನಸೆ ಎಲ್ಲವೂ. ನೀವು ಏನು ಯೋಚಿಸುತ್ತೀರೋ
ಅದೇ ಆಗುತ್ತದೆ.

– ಬುದ್ಧ

# ಬುದ್ಧ

ಜಂಬೂ ದೀಪದ ಬುದ್ಧ
ರಾತ್ರಿ ಇದ್ದಕ್ಕಿದ್ದಾಗೆ ಅವನೆದ್ದ,
ಕ್ಷಣಿಕ ಸುಖದ ಜಗವನೊದ್ದು–
ರೋಹಿಣಿಯ ತಣ್ಣಗಿನ ನೀರಿನಲಿ ಮಿಂದು
ಬೋಧಿ ವೃಕ್ಷದ ಕೆಳಗೆ ಜ್ಞಾನೋದಯವಾಗಿ ಬುದ್ಧನಾದ;
ಭವ ಬೂದಿಯಾಗಿ–
ನಾಮ–ರೂಪ ನಿಜ ಸ್ಪರ್ಶವಾಗಿ,
ಮುಪ್ಪು ಮರಣದಂತೆ ಜಾತಿ ಮತ ನಾಶವಾಗಿ
ಲೋಕಕಲ್ಯಾಣವಾಗಲಿ ಎಂದ
ಸಮ್ಮಾ ಸಂಬುದ್ಧ–
ಕಲ್ಲು ಹೃದಯಗಳ ಕರುಗಿಸಿ ಕರುಣೆ ಉಕ್ಕಿಸಿ
ಜೀವ ಜೀವಿಗಳ ಮೈತ್ರಿ ಬೆಸೆದ
ಮನು ಕುಲದ ಶ್ರೇಷ್ಠ;
ಯುಗ ಯುಗಗಳ ಮತ ಮೌಢ್ಯ ಓಡಿಸಿ
ಜಗದ ಮೊಗದಲ್ಲಿ
ಸಣ್ಣ ನಗು ಉಕ್ಕಿಸಿದವನು ಅವನೊಬ್ಬನೇ
ಲೋಕಹಿತ ತಥಾಗತ;
'ಸರ್ವೇ ಜನಾ: ಸುಖಿನೋ ಭವಂತು"
ಹರಿಸಿದ ಅರಹಂತ–
ಆಕಾಶಕ್ಕೆ ಆಕಾಶವಾಗಿ–
ನೆಲಕ್ಕೆ ನೆಲವಾಗಿ ಹರಡಿದ ಅನುಭಾವಿಯಾಗಿ
ಅಂತಃಕರುಣೆಯ ಜ್ಯೋತಿಯಾಗಿ ಬೆಳಗಿದ–
ಆನಂದನ ಭಂತೆಯಾಗಿ

ಅಮರಪಾಲಿಯ ಕಣ್ಣು ತೆರೆಸಿದ
ಗೌತಮ ಬುದ್ಧ.
'ಜಗದ ವ್ಯಾಪಾರಗಳೆಲ್ಲ ಮುಗಿಯುವುದು
ಸಾವಿನ ತೆಕ್ಕೆಯಲಿ', ಎಂದ.
ಅದಕ್ಕೆ ಮುಂಚೆ ಒಂದೆರಡು ಕ್ಷಣ
ನಮ್ಮ ನಿಮ್ಮೆಲ್ಲರ ಮನದಲ್ಲಿ
ಬುದ್ಧನು ಬರಲಿ ಒಂದು ಎಳೆಯಾಗಿ
ವಸುಂಧರೆಯ ಸುತ್ತಿ ಲೋಕ ಕಲ್ಯಾಣಕ್ಕಾಗಿ.

ದಾರಿ ಆಕಾಶದಲ್ಲಿಲ್ಲ, ನಿಮ್ಮ ಹೃದಯದಲ್ಲಿದೆ.

– ಬುದ್ಧ

# ಜೀವ ಜೀವಿಗಳ ಮೈತಡವಿ

ಭೂಮಿಗೆ–
ಬಿದ್ದ ಬೀಜ ಕ್ಷಣದಲ್ಲಿ
ಬೇರಿಳಿದು ಚಿಗುರೆಲೆಗಳ ಟಿಸಿಲೊಡೆದು
ಕೊಂಬೆರೆಂಬೆಗಳ ಬಿರಿದು
ಹೆಮ್ಮರವಾಗಿ ಬೆಳೆದು ಹಿಗ್ಗುಮೊಗ್ಗಾಗಿ
ನೀಲಿ ಪರದೆಯ ಮುಂದೆ
ಚೈತ್ರಗಳ ಸವಾರಿ ನಡೆಸಿತು
ಋತು ಋತುವಿನ ಬಣ್ಣಗಳಲ್ಲಿ.

ಸಂಜೆಗಣ್ಣನಲಿ–
ಪಿಸುಗುಡುವ, ಕಿವಿಕಚ್ಚುವ
ಆಲಂಗಿಸುವ ಎಲೆ, ಕೊಂಬೆ ರೆಂಬೆಗಳು;
ಇಕ್ಕಟ್ಟಿನಲಿ ಒಕ್ಕೂಟ ನಡೆಸುವ
ಹೂವು ಕಾಯಿ ಹಣ್ಣುಗಳ ಸಂತೆಯಲಿ
ಗೂಡುಕಟ್ಟುವ ಹಕ್ಕಿಪಿಕ್ಕಗಳು–
ಅಡಗಿ ಆಸರೆ ಪಡೆವ ಪ್ರಾಣಿ–ಪಕ್ಷಿ,
ನೇತಾಡುವ ಬಾವಲಿ, ಬಲೆ ಹೆಣೆಯುವ ಜೇಡ,
ಹದ್ದು ಹಾವಿಗೂ ತಾರತಮ್ಯವಿಲ್ಲದೆ
ನೆಲೆಯಾಗುವ, ದೂಳನ್ನು ತಡೆದು
ಜೀವಕೋಟಿಯ ಉಸಿರಾಗಿ ಮಾರ್ಪಡಿಸುವ;
ನಿಂತಲ್ಲೆ ನೆಲ ಮುಗಿಲು ಒಂದಾಗಿಸುವ,
ಬಿರು ಬಿಸಿಲನ್ನು ತಂಗಾಳಿಯಾಗಿಸುವ,
ಮಳೆ ಇಲ್ಲದೆ ನೊಂದಾಗ–

ಮೋಡಗಳ ಕರೆದು ಮಳೆ ಸುರಿಸುವ
ಜೀವ ಜೀವಿಗಳ ಮೈತಡವಿ
ಚಿಗುರೆಲೆ ತಂಪಾಗಿಸುವ ಸ್ಪರ್ಶ ಅಪರೂಪ;
ಆಯಾಸವಾದಾಗ
ಹೂವು ಎಲೆ ಹಣ್ಣು ಕಾಯಿ
ಉದರಿಸುತ್ತ ಮುಂಜಾನೆಯಂಗಳದಲ್ಲಿ
ರಂಗೋಲಿ ಬಿಡಿಸುತ್ತ ನಿಲ್ಲುವುದು
ಮರ;–
ಭೂಮಿ ಆಕಾಶದ ಮಧ್ಯೆ.



ಪ್ರೀತಿ ಮಾಡುವವರು ಎಂದಿಗೂ ಸಾಯುವುದಿಲ್ಲ. ಅವರನ್ನು ಪ್ರಾಣದ ಸಮೇತ ಹೂತುಬಿಡುತ್ತಾರೆ.

# ಬುದ್ಧ ಪೂರ್ಣಿಮೆ ಮತ್ತು ಅಣುಬಾಂಬು

ಭಾರತ ಸ್ಫೋಟಿಸಿತು
ಬುದ್ಧ ಪೂರ್ಣಿಮೆಯಂದು ಅಣುಬಾಂಬು,
ತಳ್ಳಣಿಸಿದ ಭೂಮಿ–
ಒರೆಸಿಕೊಂಡಿತು ಬೆವರ ಹನಿ.
ಯುರೇನಿಯಂ, ಥೋರಿಯಂ ವಿದುಳಗೊಂಡು
ತೂರಿತು ಚರ್ಮ, ಮೆದುಳು, ಗರ್ಭದೊಳಗೆ–
ಭೂಮಿ–ಪಾತಾಳದೊಳಗೆ.
ಜಗತ್ತು ಒಮ್ಮೆಲೆ ದೃಷ್ಟಿಸಿತು ಈ ದರಿದ್ರ
ಹಾವಾಡಿಗರು ಏನು ಮಾಡಿದರೆಂದು;
ಅಣು ಪರಮಾಣುಗಳಿಂದ ದೇಶ ಬಲಿಷ್ಠ
ಎಂದರು ವಿಜ್ಞಾನಿಗಳು; ನಾವೀಗ
ನಿದ್ದೆ ಮಾಡಬಹುದೆ ಆರಾಮ?
ಒಪ್ಪತ್ತಿಗೂ ಊಟವಿಲ್ಲದ ನಮಗೆ
ಇದು ಬೇಕಿತ್ತೇ? ಪ್ರಶ್ನಿಸಿದರು ಕೆಲವರು.
ಉತ್ತರ ಬಂದಿತು ತಕ್ಷಣವೆ ಇನ್ನಷ್ಟು ಬಾಂಬು
ಅಣುಬಾಂಬು ಸ್ಫೋಟಗಳು.

ಮೊಟ್ಟ ಮೊದಲಿಗೆ
ಹಿರೋಶಿಮ ನಾಗಾಸಾಕಿ ಮೇಲೆ ಬಾಂಬೆಸೆದ
ಲೆಫ್ಟಿನೆಂಟ್ ಕರ್ನಲ್ ಟಿಬ್ಬೆಟ್ಸ್,
ಪೈಲೆಟ್ ರಾಬರ್ಟ್ ಹಲುಬಿದರು ಆಕಾಶದಲ್ಲಿ
'ಓ... ದೇವರೆ ನಾವೇನು ಮಾಡಿಬಿಟ್ಟೆವು'
ಎಂದು; ಇನ್ನೂ ಇಳಿಯಲಿಲ್ಲ ಅವರು ಭೂಮಿಗೆ.

ಕೆಳಕ್ಕೆ ಬಿದ್ದ ಅಣುಬಾಂಬಿನ
ವಿಕಿರಣದ ನೆರಳುಗಳು ನಡೆದವು
ಪೀಳಿಗೆಯಿಂದ ಪೀಳಿಗೆಗೆ–
ಅಂಧ, ಅಂಗವಿಕಲತೆ; ಎಲುಬುಗಳೆ
ಇಲ್ಲದ ದೇಹಗಳ ಸೃಷ್ಟಿಸುತ್ತ;–
ಸತ್ತವರು ಬದುಕಿದರೆ, ಬದುಕಿದವರು
ಸತ್ತ ದಿನ ಅದು. ಇದು–
ಬಲಿಷ್ಠ ರಾಷ್ಟ್ರಗಳು ಪೇರಿಸಿರುವ
ಅಣ್ವಸ್ತ್ರಗಳ ಒಂದು ತೃಣ ಮಾತ್ರ, ಇನ್ನೂ ಇವೆ
ಇಡೀ ಭೂಮಿಯನ್ನೇ ನೂರಾರು ಸಲ
ಸುಟ್ಟು ಬೂದಿ ಮಾಡುವ ಅಣ್ವಸ್ತ್ರ,
ರಾಸಾಯನಿಕ, ಜೈವಿಕ ದಾಸ್ತಾನು;

ಮಾನವ ಬುದ್ಧಿವಂತನೆ... ರಾಕ್ಷಸನೆ...
ಪಾಪಿಯೇ...?
ಜ್ಞಾನ ವಿಜ್ಞಾನ ಆತ್ಮದ್ರೋಹವೇ...?
ಅಣುಬಾಂಬು ಸ್ಫೋಟಿಸಿದ ದಿನ
ಬುದ್ಧ ಗಾಂಧಿ ನಕ್ಕ ದಿನವೆ...?



ಮನುಷ್ಯ ಮತ್ತು ಪರ್ವತಗಳು ಸಂಧಿಸಿದಾಗ ಅದ್ಭುತ ಕೆಲಸಗಳು ಸೃಷ್ಟಿಯಾಗುತ್ತವೆ.

– ವಿಲಿಯಂ ಬ್ಲೇಕ್

# ಬೈಜಿಂಗ್

ಪರ್ಯಾಯ ದ್ವೀಪ,
ದಖ್ಖನ್, ಯರ್ರಕೊಂಡದ ನಾನು
ಇತ್ತೀಚೆಗೆ ತಲುಪಿದೆ ಬೈಜಿಂಗ್; ಬಾಗಿಲು
ತೆರೆದುಕೊಂಡಿತು ಅದು ನೇಹಾ... ನೇಹಾ...
ಎಂದು ನನ್ನ ಮುಂದೆ.

ನೂರಾಐವತ್ತು ಲಕ್ಷ ಜನಸಂಖ್ಯೆ ಹೊತ್ತ
ಬೈಜಿಂಗ್ ಮಹಾನಗರ ಸಾಗಿತ್ತು ಸರಾಗವಾಗಿ
ಬಸ್ಸು, ಟ್ರ್ಯಾಮು, ಕಾರು, ಮೆಟ್ರೊರೈಲು;
ಹತ್ತು ಕೇಜಿ ತೂಕದ ಮ್ಯಾಕ್ ಮಿಲನ್
ಸೈಕಲ್ ಮೇಲೆ.

ಪೆಕ್ಕಿಂಗ್ ಮ್ಯಾನ್‌ನ
ಸಣ್ಣ ಕಣ್ಣು, ಬೋಟು ಉಬ್ಬು, ಅಗಲ ದವಡೆ–
ಇನ್ನೂ ಅಲ್ಲೇ ಹರಿಯುತ್ತಿದ್ದವು
ಹಳದೀ ನದಿಯ ಜಾಡಲ್ಲಿ; ಹರಡಿದ್ದವು–
ಹಸನಾದ ರಸ್ತೆಗಳು ಇಕ್ಕೆಲುಗಳಲ್ಲಿ;
ಬೀರು, ಬ್ರಾಂದಿ, ಜೆನ್ ಹೂತೋಟಗಳು
ಬೈಜಿಂಗ್ ಓಪೆರಾ ನಾಟಕಗಳು–
ಸುರಂಗ ಮಾರ್ಗಗಳಲ್ಲಿ ಮಾಂಡ್ರಿನ್ ಪಾಪ್ ಗಾಯಕರು–
ಅಲ್ಲಲ್ಲಿ ಕೊರೆವ ಚಳಿಯಲ್ಲಿ ಅಪ್ಪಿ ಒಂದಾಗಿರುವ
ಯುವ ಜೋಡಿಗಳು.

ಬುದ್ಧಿ-ಬೆರಳು, ಬಾಯಿ ಮಧ್ಯೆ ಯೋಗ ಮಾಡುವ
ಎರಡು ಚೀಣಿ ಕಡ್ಡಿಗಳು.

ರಸ್ತೆ, ಮೇಲುಸೇತುವೆ, ಬಹು ಮಹಡಿಗಳಿಗೆ
ದಾರಿ ಎಲ್ಲಿ? ಎಲ್ಲವೂ ನೀಲಿ-
ಡ್ರ್ಯಾಗನ್ಸ್ ಮಹಾಗೋಡೆಯೊಳಗೆ.
ಕ್ವಿಂಗ್ ಮತ್ತು ಮ್ವಿಂಗ್‌ರು ಹಾಕಿದ್ದಾರೆ
ಇಲ್ಲಿಂದ ಸ್ವರ್ಗಕ್ಕೆ ಸಾಂಸ್ಕೃತಿಕ ಸೇತುವೆ;
ಮಹಾನಗರದ ಮಧ್ಯೆ ವಿಶ್ವದ ವಿಶಾಲ
ಟಿಯನ್‌ಮಿನ್ ಚೌಕ, ಫರ್‌ಬಿಡನ್ ಸಿಟಿ,
ಪೀಪಲ್ಸ್ ಗ್ರೇಟ್ ಹಾಲ್-
ಚೀನಾ ಚಾರಿತ್ರಿಕ ಸಂಗ್ರಾಲಯ;
ಎಲ್ಲೆಲ್ಲೂ ಹಾರಾಡುವ ಮಹೋತ್ಸಂಗ್‌ನ
ಕೆಂಬಾವುಟಗಳು.

ಆಕಾಶದಲ್ಲಿ ತುಸು ಓರೆಯಾಗಿ
ಅಂಟಿಕೊಂಡಿರುವ ಕುಡುಗೋಲು ಚಂದ್ರ,
ನಭಕ್ಕೆ ಕೊಡವಿ ನಿಂತಿರುವ ಬಹು ಮಿಲಿಯ
ಗ್ರಹ, ಉಪಗ್ರಹ ಪಬ್ಬು-ಕ್ಲಬ್ಬುಗಳು-
ರಾತ್ರಿಯೆಲ್ಲ ಚೀರಾಡಿ ಹುಲ್ಲಿನ ಮೇಲೆ
ಉದುರುವ ನಕ್ಷತ್ರ ಚೂರುಗಳು.

ಇಪ್ಪತ್ತು ದಶಕಗಳ ಕಾಲ ಗೋಡೆಯೊಳಗಡಿಗಿದ್ದ
ಇವರನ್ನು 'ಪೂರ್ವದ ರೋಗಸ್ತ ಮನುಷ್ಯ' ಎಂದು
ಹಂಗಿಸಿದ ಬಿಳಿ ಪ್ರಪಂಚ; ಎಷ್ಟೋ ದೂರ ಸಾಗಿ
ಹೋಗಿತ್ತು ಇವರಿಂದ-
ಬೆಪ್ಪು ಬೆರಗಾಗಿ ಹೌಹಾರಿದ್ದರು ಚೀನಿಯರು ಆಗ.

ಈಗ–
ಅಭಿವೃದ್ಧಿ ಎಂದರೆ ಚೀನಾ
ಚೀನಾ ಎಂದರೆ ಅಭಿವೃದ್ಧಿ– ಜಾತಿ ಮತ
ವರ್ಣ ಭೇದವಿಲ್ಲದ, ದೇಶ ಮೊದಲು
ಅನಂತರ ನಾನು ಎನ್ನುವುದೇ
ಡ್ರ್ಯಾಗನ್ಸ್ ಮಹಾ ಗುಟ್ಟು.



ಚಂದ್ರನ ಮೇಲೆ ನಿಂತು ಭೂಮಿಯ ಕಡೆಗೆ ನೋಡಿದರೆ
ಮನುಷ್ಯನು ನಿರ್ಮಿಸಿದ ಏಕೈಕ ಸ್ಮಾರಕ ಕಾಣಿಸುತ್ತದೆ.
ಅದೇ ಗ್ರೇಟ್‌ವಾಲ್ ಆಫ್ ಚೀನಾ.

# ಜಾತಿಯ ಹುಟ್ಟನ್ನು ವಿರೋಧಿಸಿ

ಜಾತಿಯು ಭವವನ್ನು
ಭವವು ಉಪಾದಾನವನ್ನು
ಉಪಾದಾನವು ತಣ್ಹಾವನ್ನು
ತಣ್ಹಾವು ವೇದನೆಯನ್ನು
ವೇದನೆಯು ಫಸ್ಸವನ್ನು
ಫಸ್ಸೆಯು ನಾಮ–ರೂಪವನ್ನು
ನಾಮ–ರೂಪವು ವಿಜ್ಞಾನವನ್ನು
ವಿಜ್ಞಾನವು ಸಂಸ್ಕಾರವನ್ನು
ಸಂಸ್ಕಾರವು ಅವಿದ್ಯೆಯನ್ನು ಹೀಗೆ
ಇವು ಒಂದನ್ನೊಂದು ಅವಲಂಬಿಸಿ
ಮರಣ, ಶೋಕ, ಪಶ್ಚಾತಾಪ, ದು:ಖ,
ದುಗುಡು, ಹತಾಶೆಯಗಳು ಹುಟ್ಟುತ್ತವೆ.
ಮರಣ, ದು:ಖಗಳನ್ನು
ವಿರೋಧಿಸಬೇಕೆಂದರೆ ಜಾತಿಯನ್ನು,
ಜಾತಿಯ ಹುಟ್ಟನ್ನು ವಿರೋಧಿಸಬೇಕು.
ಯಾವ ರೀತಿಯಲ್ಲೂ ಹುಟ್ಟು ಇಲ್ಲದಾಗ
ಹುಟ್ಟು ಎಂಬುದು ಹಳೆದುಹೋದಾಗ
ಮುಪ್ಪು ಮರಣ ಹುಟ್ಟುತ್ತದಯೇ?
ಬುದ್ಧನು ಮುಪ್ಪು ಮರಣದ ಬಗ್ಗೆ ಭಿಕ್ಷು
ಆನಂದನಿಗೆ ಹೇಳಿದ ಮಾತುಗಳು

ಜಾತಿ ಮತ್ತು ಅಸ್ಪೃಶ್ಯತೆ ಈ ದೇಶಕ್ಕಿರುವು ದೊಡ್ಡ ತೊಡುಕು.

– ಡಾ. ಬಿ.ಆರ್. ಅಂಬೇಡ್ಕರ್

# ಬಾಗಿಲೊಳಗಿನ ಬ್ರಹ್ಮಾಂಡ

ಗುಡಿಸಿಲೆಂದರೆ ಮಣ್ಣುಗೋಡೆ ಮಾಡುಕಿಂಡಿ
ಹೊಸಿತಿಲು ಬಚ್ಚಿಲು ಹಿತ್ತಿಲು
ಸಾಮಾನು ಸರಂಜಾಮು ಗಲೀಜು
ಹರುಕು ಮುರುಕು ಬೊಂತೆ
ಕಪ್ಪಾದ ಮಡಿಕೆ ಕುಡಿಕೆ
ಕಸ ಗುಡಿಸಲು ಪೊರಕೆ.
ಹಬ್ಬಿದ ಹೊಗೆ ಬಗೆ ಬಗೆಯ ಧಗೆ;
ಇಲಿ ಹೆಗ್ಗಣ ಬಿಲ ತಿಗಣಿ ಸೊಳ್ಳೆಕಾಟ
ಮಲ ಮೂತ್ರ ಮುಸರೆ,
ಕಸ ಕಡ್ಡಿ, ದಿನವಿಡೀ ದುಡಿತ
ಗುಡಿಸಿಲೆಂದರೆ–
ನೆರೆ, ಕೊರೆಯುವ ಚಳಿ, ಬಣಗುಡುವ ಬಿಸಿಲು;
ಮುಕ್ಕುವ ಬಾಯೆದುರು ಬಿಕ್ಕುವ ಅನಾಥೆ.

ಮನೆ, ಮಹಡಿ, ಬಹುಮಹಡಿ ಎಂದರೆ
ಕಿಚ್ಚ್‌ನು ಹಾಲ್ ಬೆಡ್‌ರೂಮು–
ನಡುವೆ ದೇವರ ಮನೆ;
ಕಾರು ಸ್ಕೂಟರು ಅಲ್‌ಮಿರಾ;
ಹಣ–ಒಡವೆ ಕಾಯಲು ಜೂಲುನಾಯಿ.
ಟಿವಿ ಕಂಪ್ಯೂಟರು ಫ್ಯಾನು ಫೋನು ವಿಡಿಯೊಗೇಮು–
ಸೋಫಾ ಮೇಜು ಕುರ್ಚಿ ಮೆತ್ತನೆ ಹಾಸಿಗೆ;
ಸುತ್ತಲೂ ಸೊಳ್ಳೆ ಪರದೆ.
ತಾಜಾ ಹಣ್ಣು ಹಂಪಲು ತುಂಬಿದ ಫ್ರಿಡ್ಜ್

ಗೀಝರು ಗ್ಯಾಸು ವಾಷಿಂಗ್ ಮಿಷಿನ್,
ಅನ್ನ ಮಾಡಿ ಕರೆವ ಕುಕ್ಕರು;
ತೊಟ್ಟಿಕ್ಕುವ ನೀರಿನ ಫಿಲ್ಟರು.
ಸುಕ್ಕು ಚರ್ಮಕ್ಕೆ ಬ್ಯೂಟಿ ಪಾರ್ಲರ್;
ಆರೋಗ್ಯಕ್ಕೆ ಯೋಗ, ವಾಯುವಿಹಾರ.

ಗುಡಿಸಿಲು-ಮನೆ, ಏನೇ ಆಗಲಿ
ಹೆತ್ತ ಒಡಲು ಖುಷಿ ಕೊಡುವ ಮಡಿಲು;
ಮಕ್ಕಳ ಕೇಕೆ ಹರ್ಷ,
ಬದುಕಿನ ಸಜೀವ ಸ್ಪರ್ಶ;
ಯಾರೇ ಬಂದರೂ ಯಾರೇ ಹೋದರು
ಮನೆ ತಂಗುವ ಬಂದರು.
ಕಾಫಿ ಚಹ ತಿಂಡಿ ತೀರ್ಥ
ಮನೆಯ ರುಚಿಯೇ ರುಚಿ;
ಮನೆ ಮಠ ಛತ್ರ ಕುರುಕ್ಷೇತ್ರ-
ಮನೆ ಸೆರೆಮನೆ ಕಛೇರಿ ಮಾರುಕಟ್ಟೆ
ಬಿಟ್ಟರೆ ಮೂರಾಬಟ್ಟೆ.
ಮನೆ ಬದುಕಿನ ಕಥೆ, ರಸಕವಿತೆ
ಒಟ್ಟಿನಲ್ಲಿ ಗುಡಿಸಿಲು-ಮನೆ
ಬಾಗಿಲೊಳಗೆ ಬ್ರಹ್ಮಾಂಡ.

ಪ್ರೇರಣೆ : ಪ್ರೊ. ನಿಸಾರ್ ಅಹ್ಮದ್ ಅವರ ಒಂದು ಕವನ.

ಪ್ರೀತಿ ಮನೆಯಲ್ಲಿಯೇ ಪ್ರಾರಂಭವಾಗುತ್ತದೆ. ನಾವು ಎಷ್ಟು ಮಾಡುತ್ತೇವೆಂದಲ್ಲ, ಅದನ್ನು ಎಷ್ಟು ಪ್ರಯೋಗಿಸುತ್ತೇವೆ ಎನ್ನುವುದು ಮುಖ್ಯ

– ಮದರ್ ತೆರೆಸಾ

# ತಲೆಗಳು ಬೇಕಾಗಿವೆ ತುರ್ತಾಗಿ

ತಲೆಗಳು ಬೇಕಾಗಿವೆ ತುರ್ತಾಗಿ
ಪ್ರತಿಭಟನೆ, ವಿರೋಧಗಳ ತೋರದೆ
ಇರುವುದನ್ನು ಇರುವ ಹಾಗೆ ಒಪ್ಪಿ,
ಅಪ್ಪಿತಪ್ಪಿಯೂ ಬದಲಾವಣೆಯನೊಪ್ಪದ
ತಲೆಗಳು ಬೇಕಾಗಿವೆ ತುರ್ತಾಗಿ.

ಹೌದೆಂದಾಗ ಮೇಲೆ ಕೆಳಗೆ ಆಡಿಸಲಿಕ್ಕೆ,
ಊಹು: ಅಂದಾಗ ಅತ್ತಿತ್ತ ಅಲ್ಲಾಡಿಸಲಿಕ್ಕೆ;
ಉದ್ದಗಿಡ್ಡ, ದುಂಡು, ಚಪ್ಪಟೆ, ಗುಂಗುರು
ಕಪ್ಪು ಕೂದಲು, ಬೈತಲೆ, ಬಟ್ಟತಲೆ; ಜುಟ್ಟುಬಿಟ್ಟ
ತಲೆಗಳು ಬೇಕಾಗಿವೆ ತುರ್ತಾಗಿ.

ಆಲೋಚನೆ, ವಿವೇಚನೆಗೆ ಆಸ್ಪದವಿಲ್ಲದ
ತಿಕ್ಕಿದರೂ, ತಿವಿದರೂ ತಿರುಗಿಯೂ ನೋಡದ-
ಹೊಡೆದರೂ ಬಡಿದರೂ ಬೇಜಾರು ಪಡದ;
ಮತದಾನ, ಬಹುಮತದ ಯಾಚನೆ
ತಲೆದೂರಿದಾಗ ಎಣಿಸಲಿಕ್ಕೆ ಫ್ಲೋರಿನಲ್ಲಿ
ತಲೆಗಳು ಬೇಕಾಗಿವೆ ತುರ್ತಾಗಿ.

ತಲೆತಿಂದರೂ, ತಲೆಯಿಲ್ಲವೆಂದು ತಿಳಿದರೂ,
ನೊಂದರೂ ಒಟ್ಟಾರೆ ತರಲೆ ತಂದೊಡ್ಡದ,
ಉಳ್ಳವರ, ಆಳುವವರ ಲೆಕ್ಕದ ಎಣಿಕೆಗಾಗಿ

ಘನ ದೇಶ ಪ್ರಜಾಪ್ರಭುತ್ವದ ಉಳಿವಿಗಾಗಿ-
ಯಾವುದಕ್ಕೂ ಟೋಪಿ ಹೆಲ್ಮೆಟ್ ಧರಿಸದ
ತಲೆಗಳು ಬೇಕಾಗಿವೆ ತುರ್ತಾಗಿ.

ಬದುಕು ಏರುಪೇರಾದರು ತಡೆದುಕೊಳ್ಳುವ-
ಅಪಮಾನವಾದರು ಸಹಿಸಿಕೊಳ್ಳುವ,
ರಾಜ್ಯದ ಜನರೆಲ್ಲ ಒಂದಾಗಿ ಎದ್ದುಬಂದರೂ,
ವಿಧಾನಸೌದ ಬಿದ್ದುಹೋದರು;
ತಣ್ಣನೆ ತಲೆಗಳು ಬೇಕಾಗಿವೆ ತುರ್ತಾಗಿ
ಜನತಾ ಮಂಡಿಯಲ್ಲಿ ತೀರ್ಮಾನವಾಗುವುದು
ತಲೆಗೆ ತಕ್ಕ ಬೆಲೆ-
ತಲೆಗಳು ಬೇಕಾಗಿವೆ ತುರ್ತಾಗಿ.



ಎಲ್ಲಾ ರಾಜಕಾರಣಿಗಳು ಒಂದೇ. ನದಿ ಇಲ್ಲದ ಕಡೆ
ಸೇತುವೆ ಕಟ್ಟುತ್ತೇವೆಂದು ದೇವರ ಮೇಲೆ
ಪ್ರಮಾಣ ಮಾಡಿ ಹೇಳುತ್ತಾರೆ.

# ಈರುಳ್ಳಿ

ದೈವಿಕ ಶಕ್ತಿ, ಔಷಧಿ ಗುಣ,
ಕೆಂಪು ಬಣ್ಣ; ಘಾಟು ರುಚಿಯ ಮೆಚ್ಚುವ ಜನ-
ಪಕೋಡ, ಬಜ್ಜಿ, ದೋಸೆ, ಚಟ್ನಿ, ಸಾಂಬಾರು, ಸಾಲೆದ್
ಹೀಗೆ ಎಲ್ಲಕ್ಕೂ ಸೇರಿಸಿ ಭಕ್ಷಿಸುವರು ಉಳ್ಳಾಗಡ್ಡಿಯ.

ಇತ್ತೀಚೆಗೆ ಈ ಉಳ್ಳಾಗಡ್ಡಿ
ಜನಸಾಮಾನ್ಯರ ಕೈಗೆ ಎಟುಕದಾಗಿ,
ಅಂಗಡಿಯಲ್ಲಿ ಆಟಂಬಾಂಬಾಗಿ, ಅಡಿಗೆ ಮನೆಯಲ್ಲಿ
ಹೆಂಗಳೆಯರ ಕಣ್ಣೀರು ಕರೆಸಿ, ಪತ್ರಿಕೆಗಳಲ್ಲಿ
ನಿತ್ಯ ಸುದ್ದಿಯಾಗಿ ರಾರಾಜಿಸಿತು ನೀರುಳ್ಳಿ.

ಮಹಾವಿಷ್ಣುವಿನ ಯುದ್ಧ ಕಹಳೆ ಶಂಖುವಿನಂತೆ,
ನಿಲ್ಲಿಸಿದರೆ ಎಲೆಗಳ ಸಮೇತ ಗದೆಯಂತೆ,
ಕೊಯ್ದರೆ ಗಾಲಿಗಳಾಗಿ, ತಲೆ ಕತ್ತರಿಸುವ ವಿಷ್ಣುಚಕ್ರದಂತೆ
ಕಾಣಿಸುವುದು ಈ ಉಳ್ಳಾಗಡ್ಡಿ.

ಕೇಸರಿ ಧ್ವಜದಲ್ಲಿ ಪಕಳೆ ಬಿಡಿಸಿಟ್ಟ
ಕಮಲದಂತೆ, ಪೋಕ್ರಾನ್‌ನಲ್ಲಿ
ಅಣುಬಾಂಬು ಸಿಡಿಸಿದ ಸಾಫ್ರಾನ್‌ವಾದಿಯಂತೆ,
ಪಾಕಿಸ್ತಾನ ನಿದ್ದೆ ಕೆಡಿಸಿದ್ದ ಈ ಉಳ್ಳಾಗಡ್ಡಿ.
ಮೂರ್ಛೆಹೋದವರನ್ನು ಜಾಗೃತಗೊಳಿಸುತ್ತ,
ಎಚ್ಚರವಿದ್ದವರನ್ನು ಮೂರ್ಛೆಯಲ್ಲಿ ಕೆಡುವುತ್ತ-
ಒಮ್ಮೆಲೆ ದೇಶವನ್ನು ದಿಗ್ಭ್ರಮೆಗೊಳಿಸಿತು,
ಹೆಬ್ಬೆಟ್ಟು ಗಾತ್ರದ ಈ ನೀರುಳ್ಳಿ.

ಜನಸಾಮಾನ್ಯರ ಶಕ್ತಿಯನ್ನು ತಾನೇ ಪ್ರದರ್ಶಿಸುತ್ತ-
ನಿರ್ನಾಮವಾಗಿದ್ದ ರಾಜಕೀಯ ಪಕ್ಷಗಳ
ಪುನರ್ಜೀವಗೊಳಿಸುತ್ತ, ಮಾತು ತಪ್ಪಿದರೆ ನೆಲಕಚ್ಚಿಸುತ್ತ,
ದಿಲ್ಲಿ ಸಿಂಹಾಸನವನ್ನೇ ಗಡಗಡ ನಡಿಗಿಸುತ್ತ;
ಪ್ರಜಾಪ್ರಭುತ್ವ, ದೇಶವನ್ನು ಎಚ್ಚರದಲ್ಲಿಟ್ಟಿರುವ
ಈ ನೀರುಳ್ಳಿಗೆ ಈ ಈರುಳ್ಳಿಯೇ ಸಾಕ್ಷಿ.



ಈರುಳ್ಳಿಯ ಬೆಲೆ ಗಗನವೇರಿದ್ದ ಸಮಯದಲ್ಲಿ
(ಡಿಸೆಂಬರ 1998) ಬರೆದ ಕವಿತೆ.

ಈರುಳ್ಳಿ ಮಹಿಳೆಯರಲ್ಲಿ ಕಣ್ಣೀರು ತರಿಸುವುದು ನಿಜ. ಆದರೆ ಯಾವುದೇ
ತರಕಾರಿ ಅವರನ್ನು ನಗಿಸುವಲ್ಲಿ ಸಫಲವಾಗಿಲ್ಲ.

# ಅಮೃತ ಸದೃಶ

ಅಕ್ಕಪಕ್ಕದ ಬಂಧು ಬಾಂಧವರ
ಎಳೆದೆಳೆದು ಕಡಿಯುತ್ತಿರುವ
ಹಸುಗಳ ನಡುವೆ ಕರುಗಳು
ಕಾಯುತ್ತಿವೆ ತಮ್ಮ ಸರತಿಗಾಗಿ.

ಏಗೋ ಏನೋ ಗೋಡೆಯ ಮೇಲೆ
ಬೇರು ಬಿಟ್ಟ ಮೊಳಕೆ
ಕತ್ತು ಚಾಚಿದೆ ಬೆಳಕಿನ ಕಡೆಗೆ.

ಸುಖ ಕಂಡರೂ, ದು:ಖ ಕಂಡರೂ
ಕಣ್ಣಂಗಳದಲ್ಲಿ ಬಿದ್ದು ತೊಯ್ಯುವುದು
ಕಣ್ಣೀರ ಹುಟ್ಟು ಗುಣ.

ಮೂರು ಗಂಟಿನ ತಾಳಿಯೊಳಗೆ
ಇಂತಹ ಕರ್ಮಯೋಗವ
ಕಲಿತುಕೊಂಡಿದ್ದೇಗೆ ಹೆಣ್ಣು...?
ಅದರೊಳಗೆ ಉಳಿದುಕೊಂಡೆ
ಜಗವ ಬೆಳಗಿದ್ದೇಗೆ...?

ಹೀಗೆ...
ಕವಿತೆ ಯಾವಾಗಲೋ ಒಮ್ಮೆ
ಕೈಹಿಡಿದು ಕರೆದೊಯ್ಯುವುದು
ಅಮೃತ ಸದೃಶ್ಯಕ್ಕೆ.



ಮನೆಗಳಲ್ಲಿ ದುಡಿಯುವ ತಾಯಂದಿರು ಮತ್ತು ಪತ್ನಿಯರಿಗೆ
ನಿಗದಿತ ಸಮಯವೇ ಇರುವುದಿಲ್ಲ, ಅವರಿಗೆ
ರಜೆಯೂ ದೊರಕುವುದಿಲ್ಲ.

# ಮುಪ್ಪು

ಮುಪ್ಪಡರಿದ ಮುದುಕ
ಮರದ ನೆರಳಿಗೆ, ಕಲ್ಲುಬೆಂಚಿನ ಮೂಲೆಗೆ
ಇಲ್ಲ ದೇವಾಲಯದ ಗೋಡೆಗೆ ಒರಗಿರುವನು
ಯಾವಾಗಲು ಮಂದಬುದ್ಧಿಯ ಮಗುವಿನಂತೆ–
ದಿಕ್ಕಿಗೊಂದು ಕೈಕಾಲು, ಅಡ್ಡಲಾಗಿ ಊರುಗೋಲು;
ಕಣ್ಣಿನಲ್ಲಿ ದೈನೇಸಿ ನೋಟ ಹೊತ್ತಿರುವ
ಈ ಮುದುಕ–
ಯುವಕನಾಗಿದ್ದಾಗ, ಮಕ್ಕಳಿಗೆ ತಂದೆಯಾಗಿದ್ದಾಗ,
ಹೆಂಡ್ತತಿಗೆ ಗಂಡನಾಗಿದ್ದಾಗ,
ಮೈ ಕೈಗಳಲ್ಲಿ ಬಲವಿದ್ದಾಗ–
ಹೆಂಡ್ತತಿ ಮಕ್ಕಳು ಅವನಿಗಾಗಿ ಬಾಗಿಲಿಲ್ಲ
ಕಾಯುತ್ತಿದ್ದಾಗ–
ಮಕ್ಕಳಿಗೆ ಕನಸುಗಳನ್ನು, ಪತ್ನಿಗೆ
ಮಲ್ಲಿಗೆ ಹೂಕಟ್ಟು ತರುತ್ತಿದ್ದ;–
ರುಜುವಾತು ತೋರಿಸುತ್ತಾನೆ ಎಲ್ಲರಿಗೂ ತನ್ನ ಹಸ್ತಗಳಲ್ಲಿ;
ಈಗ ಅವನೊಬ್ಬನೆ ಒಂಟಿ, ಜಗದಲ್ಲಿ;
ಲೋಕವೇ ಹಾಗೆ...
ನಡೆಯುವುದು ಮುಪ್ಪಿನ ಕಡೆಗೆ.
ಕಾಲ ಸವೆದು ಅಪ್ಪಳಿಸುವುದು
ಮರಳಿನ ಸಮುದ್ರ ದಂಡೆಗೆ.
ದು:ಖವೆಲ್ಲ ಎದೆಯಲ್ಲಿ ಇಂಗುವ ಹೊತ್ತು,
ಸುಕ್ಕುಗಟ್ಟಿದ ಚರ್ಮದಲ್ಲಿ ಹೆಪ್ಪುಗಟ್ಟಿದ

ನಾನೂ ಕವನ, ಕವನ ನಾನೂ–
ಆಲೋಚಿಸುತ್ತೇವೆ ದಿನಾ ಬೆಳಿಗ್ಗೆ ಕುಳಿತೂ ನಿಂತೂ–
ಈ ಕಾಯ ಎಲ್ಲಿಗೆ ದಾವಿಸುತ್ತಿದೆ ಕ್ಷಣಕ್ಕೆ
ಸಾವಿರ ಕಿ.ಮೀ. ವೇಗದಲ್ಲಿ–
ಗಕ್ಕನೆ ಒಮ್ಮೆ ಉಸಿರುಗಟ್ಟಿ ನಿಂತುಬಿಟ್ಟರೆ
ಏನಾಗಬಹುದು? ವಿಜ್ಞಾನಿಗಳ ಆತಂಕ;
ಯಾವುದೋ ಉಲ್ಕೆ, ಆಕಾಶ ಕಾಯ, ನಕ್ಷತ್ರ ಚೂರು
ಧೂಮುಕೇತುವಿನ ಬಾಲದಿಂದ ಯಾರಾದರೂ
ಇಳಿದು ಬರುವರೇ...? ಭೂಮಿಗೆ.

ನಾನೂ ಕವನ, ಕವನ ನಾನೂ–
ಆಲೋಚಿಸುತ್ತೇವೆ ದಿನಾ ಬೆಳಿಗ್ಗೆ ಕುಳಿತೂ ನಿಂತೂ–
ಮೈಯೇ ಕೈ–ಕಾಲಾಗಿ ಓಡುವ ನದಿಯ ಬಗ್ಗೆ,
ಹಗಲಿರುಳು ಉರುಳುವ ನೀಲಿ ಕಡಲ ಕುರಿತು;
ಕೃಷ್ಣ ರಂಧ್ರಗಳಲ್ಲಿ ಅಡಿಗಿ ಕುಳಿತ ಕಾಲ,
ಜ್ಯೋತಿರ್ವರ್ಷಗಳಲ್ಲಿ ಸಾಗುವ ಬೆಳಕ–
ಸಮುದ್ರದಲ್ಲಿ ಮಿನಿಗುವ ನಕ್ಷತ್ರಗಳ;
ಹಗಲೂ–ರಾತ್ರಿ ಕೂಡಿಕೊಳ್ಳುವ ಭೂತ ಭವಿಷ್ಯದ ಬಗ್ಗೆ.

ನಾನೂ ಕವನ, ಕವನ ನಾನೂ–
ಆಲೋಚಿಸುತ್ತೇವೆ ದಿನಾ ಬೆಳಿಗ್ಗೆ ಕುಳಿತೂ ನಿಂತೂ–
ಮಾನವ ಹಾರಿಸಿದ ಉಪಗ್ರಹ–ಸೆನ್ಸಾರ್‌ಗಳ ಬಗ್ಗೆ–
ಭೂಕಕ್ಷೆಯಲ್ಲಿ ಕೈಕಾಲು ಮುರಿದುಕೊಂಡವು,
ಅಪಘಾತವಾದವು, ಮುಪ್ಪಿನಿಂದ ಸತ್ತವುಗಳ ಬಗ್ಗೆ–
ಸ್ಪೇಸ್ ಡೆಬ್ರಿ ತುಂಬಿಹೋದ ಇವುಗಳನ್ನು ಗುಡಿಸಿ
ಹಾಕುವುದಾದರು ಯಾವ ತಿಪ್ಪೆಗೆ?

ನಾನೂ ಕವನ, ಕವನ ನಾನೂ–
ಆಲೋಚಿಸುತ್ತೇವೆ ದಿನಾ ಬೆಳಿಗ್ಗೆ ಕುಳಿತೂ ನಿಂತೂ–
ಬಿಸಿಲನ್ನೇ ಬಳಿದುಕೊಂಡ ಗುಡ್ಡಗಳ ಬಗ್ಗೆ,

ಗುಹೆಯ ಒಳಗೆ ಹಾಸಿಗೆ ಹಾಸಿ–
ಹೊರಗೆ ಮಲಗುವ ಬೆಟ್ಟಗಳ ಕುರಿತು;
ಬೆತ್ತಲೆಯಾದ ಇವುಗಳಿಗೆ
ಕೆಲವು ಗಿಡಗಳನ್ನಾದರೂ ತೊಡಿಸಬೇಕು
ಇಲ್ಲ ನಾವೇ ಬೆತ್ತಲೇಯಾಗಬೇಕು.
ನಾನು ಕವನ ಕವನ ನಾನು–
ಆಲೋಚಿಸುತ್ತೇವೆ ದಿನಾ ಬೆಳಿಗ್ಗೆ ಕುಳಿತೂ ನಿಂತೂ–



ಕವಿತೆ ಬರೆಯುವುದೆಂದರೆ ಸಂತೋಷ ಮತ್ತು
ಸತ್ಯವನ್ನು ಬೆಸೆಯುವುದು.
– ಸಾಮ್ಯಾಲ್ ಜಾನ್‌ಸನ್

# ಮನುಷ್ಯ ಮತ್ತು ವಾಹನ

ಹುಟ್ಟಿಕೊಳ್ಳುತ್ತವೆ ವಾಹನಗಳು
ಕಾರ್ಖಾನೆಗಳಲ್ಲಿ, ಮನುಷ್ಯನ ಹೊಟ್ಟೆಯಲ್ಲಿ;
ಮನುಷ್ಯನಿಗೆ ಕಣ್ಣುಗಳಿದ್ದಂತೆ–
ವಾಹನಗಳಿಗೂ ಉಂಟು ಎರಡು ದೀಪಗಳು;
ಮನುಷ್ಯನಿಗೆ ಗಟ್ಟಿಯಾದ ಎಲುಬು, ಕೈಕಾಲು,
ಮೊಣಕಾಲು ಚಿಪ್ಪುಗಳಿದ್ದರೆ; ವಾಹನಗಳಿಗೆ
ನೆಲ ತಬ್ಬಿ ಓಡಾಡಲು ನಾಲ್ಕು ಚಕ್ರಗಳು;
ಎಣ್ಣೆ–ಗ್ರೀಸು ಸವರಿದ ಗಟ್ಟಿಮುಟ್ಟು
ಬೇರಿಂಗ್‌ಗಳೇ ಅದರ ಕೈಕಾಲು ಕೀಲುಗಳು.

ಬ್ಯಾಟರಿ ಚಾರ್ಜು ಮಾಡಿ
ಕೀಕೊಟ್ಟರೆ ಹೃದಯಕ್ಕೆ–
ರಕ್ತ ಹರಿದು ಚಾಲನೆಗೊಳ್ಳುತ್ತದೆ ಎಂಜಿನು
ಬುರ್‍ರ್‍... ರ್‍ರ್‍... ಎಂದು ಶ್ವಾಸ–ನಿಶ್ವಾಸ ಬಿಡುವ
ಎದೆಗೂಡು; ಕುದಿಯುವ ಜನರೇಟರು.
ರಸ್ತೆ ಬೀದಿ, ಬಯಲು, ಕಛೇರಿ–ಕಾರ್ಖಾನೆಗಳಲ್ಲಿ
ಸದಾ ದುಡಿತ, ಮನುಷ್ಯರಿಗೆ ಮನೆಯಲ್ಲಿ ವಿಶ್ರಾಂತಿ,
ವಾಹನಗಳಿಗೆ ಶೆಡ್ಡು.
ಕಳಪೆ ಕಲಬೆರಕೆ ಏನೇನೋ ತಿಂದು
ಹೊಟ್ಟೆ ಕೆಟ್ಟಾಗ ಪಟರ್ ಪಟರ್ ಎನ್ನುವುದು
ಮನುಷ್ಯನಿಗೆ ಹಿಂದೆ, ವಾಹನಗಳಿಗೆ ಸೈಲೆನ್ಸ್‌ರು.
ಕೆಮ್ಮು ದಮ್ಮು ಕಾಯಿಲೆ ಬಂದಾಗ ಮನುಷ್ಯರಿಗೆ
ಆಸ್ಪತ್ರೆ, ವಾಹನಗಳಿಗೆ ಶೆಡ್ಡು, ಗ್ಯಾರೇಜು.

ವಾಹನಗಳಿಗೆ ಅಪಘಾತವಾದಾಗ, ಕೈಯೋ ಕಾಲೋ
ಮುರಿದುಕೊಂಡಾಗ; ಇಲ್ಲ ಸತ್ತೆಹೋದಾಗ–
ಮನುಷ್ಯರಂತೆ ವಾಹನಗಳಿಗೂ ತಪ್ಪಿದ್ದಲ್ಲ
ಪೊಲೀಸ್ ಠಾಣೆ, ಕೋರ್ಟು ಕಛೇರಿ ಅಲೆತ;
ಅಂತಿಮವಾಗಿ ಮನುಷ್ಯರಂತೆ
ವಾಹನಗಳೂ ಸಾಯುತ್ತವೆ ಜಂಗು ಕಾಯಿಲೆ ಹಿಡಿದು
ಇಲ್ಲ ವೃದ್ಧಾಪ್ಯ ತಲುಪಿ.



## ಮನುಷ್ಯ ಒಂದು ಕೆಟ್ಟ ಯಂತ್ರ

## ಬಿಸಿಲ ಹನಿ

ಬಳ್ಳಾರಿ–ರಾಯಚೂರು
ಬಿಸಿಲೆಂದರೆ ಹೀಗೆಯೇ ಧಗ ಧಗ
ಎನ್ನುವ ಕಡು ಬಿಸಿಲು ಕೆಂಡಮಂಡಲ.
ಊಟಿ, ಸಿಮ್ಲಾ, ಮಸೂರಿ
ಗಿರಿಧಾಮಗಳು ಕಸಿದುಕೊಂಡಿವೆ
ಬಯಲು ಸೀಮೆಯ ತಂಪನ್ನೆಲ್ಲ.
ಉರಿವ ಮೈಮನಸ್ಸು–
ನಿಂತ ಮರ, ಗಿಡ, ನೀಲಿ ಮೈದಾನ;
ಪ್ರತಿ ಕಣ್ಣಲ್ಲೂ ಉರಿವ ಬೆಂಕಿ ನಕ್ಷತ್ರ,
ಎಲೆಗಳ ನಡುವೆ ಬೆದುರಿ ಕುಳಿತ ಗಾಳಿ,
ಪಾತಾಳದಲ್ಲಿ ಅಡಿಗಿ ಕುಳಿತ ಬೊಗಸೆ ನೀರು.
ಈ ಬಯಲು ಜನರ ತಂಪೆರೆಯಲು
ವರ್ಷಕ್ಕೊಮ್ಮೆ ಬರಬೇಕು ಮುಂಗಾರು,
ಫೇಲಾದರೆ ಹಿಂಗಾರು–
ಅದೂ ಇಲ್ಲದೆ ವರ್ಷಗಟ್ಟಲೆ ಕಂಗಾಲು
ಕಡುಬಿಸಿಲಿನ ಕೆಂಡ ಮಂಡಲ–
ತಾಳಲಾರದೆ ಹಾದಿ ಬೀದಿ ಅಂಗಡಿಗಳಲ್ಲಿ
ಲಿಮ್ಕಾ ಪೆಪ್ಸಿ ತಮ್ಸ್ಅಫ್, ಗೋಲಿ ಹೊಡೆದು
ಸೋಡಾ ಕುಡಿದರೂ, ಮಗ್ಗು ಮಗ್ಗು ಬೀರಿ
ಹೀರಿದರೂ ತಂಪೇನೂ ತರಲಿಲ್ಲ ಜನರಲ್ಲಿ.
ಬಳ್ಳಾರಿ–ರಾಯಚೂರು
ಬಿಸಿಲೆಂದರೆ ಹೀಗೆಯೇ ಧಗ ಧಗ
ಎನ್ನುವ ಕಡು ಬಿಸಿಲು ಕೆಂಡಮಂಡಲ.



# ಆತಂಕ

ಸೂರ್ಯ ಮುಳುಗುತ್ತಿದ್ದಂತೆ–
ಕವಿಯುತ್ತದೆ ಚಿಂತೆಯ ಕಾರ್ಮೋಡಗಳು; ಮನೆ,
ಮನಗಳ ಸುತ್ತ, ಹಾದಿ ಬೀದಿ ಹಳ್ಳಿ ನಗರಗಳ ದಾಟಿ;
ಗಿರಿ ಶಿಖರ ಆಕಾಶದವರೆಗೆ–
ದುಡಿಯಲೆಂದು ಹೊರಗೋದ ಮಗನ
ಆಗಮನಕ್ಕೆ ತಾಯಿ, ವೃದ್ಧ ತಂದೆ ಮಗನಿಗಾಗಿ,
ತಂಗಿ ಅಣ್ಣನಿಗಾಗಿ, ಹೆಂಡ್ತತಿ ಗಂಡನಿಗಾಗಿ ಕಾಯುತ್ತಾಳೆ
ಬಾಗಿಲಿಗೆ ಕಣ್ಣನಿಟ್ಟು–
ಹೋದವರು ಹಿಂದಿರಿಗಿದರೆ
ಬೆಳಕು ಮೂಡುವುದು ಅವರ ಕಣ್ಣುಗಳಲ್ಲಿ; ಬರದಿದ್ದಲ್ಲಿ
ಕಾಯುವವರ ಕಣ್ಣುಗಳಲ್ಲಿ ಆತಂಕ ಮೂಡಿ,
ಏಳುವುದು ಗುಂಡಿಗೆಯಲ್ಲಿ ಗುಂಡಿನ ಸಪ್ಪಳ,
ಅದರ ಮಾರ್ದನಿ ಹಾದಿ ಬೀದಿ ಹಳ್ಳಿ, ನಗರ
ಗಿರಿ ಶಿಖರಗಳ ಹಬ್ಬಿ ಅಳುವುದು
ಇಡೀ ರಾತ್ರಿ ಮೌನವಾಗಿ.
ಕೊಲೆಗಿಂತ ಹೆಚ್ಚಿನದನ್ನು, ರಕ್ತದಿಂದ ಶಾಂತಿಯನ್ನು
ಪಡೆಯದ ಆತಂಕವಾದಿಗಳು
ನಿತ್ಯವೂ ಹರಿಸುವರು ಕಣ್ಣೀರ ಕೋಡಿ.
ಎಲ್ಲೆಲ್ಲೂ ಹೇಡಿಗಳ ಯುದ್ಧಕಾಂಡ.
ವಸುಂಧರೆ ಎದೆಯ ಮೇಲೆ
ಚೆಲ್ಲಾಪಿಲ್ಲಿಯಾದ ರಾಶಿ ರಾಶಿ ಹೆಣಗಳು;

ತಿನ್ನಲೂ ಉಣ್ಣಲೂ ಬೇಕೇಬೇಕು ಕೈ,
ಬೆಳಗಿನ ನಿತ್ಯ ಕ್ರಿಯೆಗಳಿಗೂ ಸೈ,
ಚರಿತ್ರೆ, ವಿಜ್ಞಾನ, ಕಂಪ್ಯೂಟರ್ ಬಟನ್
ಒತ್ತಲೂ ಕೈ, ಹೊಟ್ಟೆಪಾಡಿಗೂ ಕೈ,
ಗೇಣು ಬಟ್ಟೆ ನೇಯಲೂ ಕೈ, ಇದೆ
ನಮ್ಮ ನಿಮ್ಮೆಲ್ಲರ ಸೈ ಸೈ ಈ ಕೈಯಿ.



**ದೇವರು ಎರಡು ಕೈಗಳನ್ನು ಕೊಟ್ಟಿರುವುದು, ಒಂದರಲ್ಲಿ ಪಡೆದುಕೊಂಡಿದ್ದನ್ನು ಇನ್ನೊಂದರಲ್ಲಿ ಕೊಡುವುದಕ್ಕೆ.**

# ಮರ

ಆ ಮರ–
ಮುಂಜಾನೆ ಮೂಡಣದಲ್ಲಿ,
ಮುಸ್ಸಂಜೆ ಪಡುವಣದ ಕಡಲಲ್ಲಿ;
ನಿಂತು ಸಲ್ಲಿಸುತ್ತದೆ ದೀರ್ಘ ಪ್ರಾರ್ಥನೆ.
ಕೊಂಬೆ, ರೆಂಬೆ, ಟಿಸಿಲು, ಹೂವಲೆ
ಎಣೆಯಲು ತಣ್ಣಿರುಳು;
ಅವುಗಳ ಮೇಲೊರಗಿ
ದಣಿವಾರಿಸಿಕೊಳ್ಳುವ ಹವೆ, ಸಕಲ
ಚರಾಚರಗಳ ಉಸಿರು–
ನೆಲಕ್ಕೂ ಜೀವಕುಲಕ್ಕೂ ಮಧ್ಯೆ ಜೀವನಾಡಿ.
ಹುಳು, ಉಪ್ಪಟೆ, ಪಕ್ಷಿ ಪ್ರಾಣಿಗಳ ಪೋಷಕ,
ಎಲ್ಲವನ್ನೂ ನೀಡಿ, ತನಗೆ ಏನೂ ಬೇಡದ
ಮೂಕ ಪ್ರೇಕ್ಷಕ.
ಬೇಸಿಗೆಯ ಮರದ ನೆರಳು
ನೀರಿಗಿಂತ ತಂಪು; ಕೆಳಗೆ
ಹಸು, ಕುರಿಗಳ ಗುಂಪು; ಚಿಗುರೆಲೆಗಳು
ಆಡಿನ ಮರಿಗಳ ಕುರುಕುರು ಉಪಹಾರ.
ಕೊಂಬೆಗಳಿಗೆ ಉಯ್ಯಾಲೆ ಕಟ್ಟಿ ಗಾಳಿಯಲ್ಲಿ
ತೂಗೂಯ್ಯಾಲೆ ಆಡುವ ಮಕ್ಕಳು.
ಊರು ಬೆಳೆದು ವಿಶಾಲ ನಗರವಾಗಿ
ವಾತಾವರಣ ಉಸಿರುಗಟ್ಟಿ, ಮರವಾಯಿತು
ದಮ್ಮು ರೋಗದ ಮುದುಕನ ಹಾಗೆ; ಈಗೀಗ
ಮಲಗಿ ನಿದ್ರಿಸುವುದೇ ಅಪರೂಪ.

ಶತಮಾನದಿಂದ ಶತಮಾನಕ್ಕೆ
ನಡೆಯುವ ಕಾಲದ ತಿರುವಿನಲ್ಲಿ ನಿಂತ ಮರ
ಪ್ರಾರ್ಥಿಸುತ್ತಿದೆ ಹಸಿರು ಉಸಿರಿನ ಉಳುವಿಗಾಗಿ
ದಿನ ನಿತ್ಯ ಮುಂಜಾನೆ ಮೂಡಣದಲ್ಲಿ-
ಮುಸ್ಸಂಜೆ ಪಡುವಣದಲ್ಲಿ.

**ಮರಗಳ ಜೊತೆ ಮಾತನಾಡುವುದು ಗೊತ್ತಿರುವವರಿಗೆ, ಮರಗಳು ಹೇಳುವುದನ್ನು ಕೇಳಿಸಿಕೊಳ್ಳುವವರು ಸತ್ಯವನ್ನು ಕಲಿಯುತ್ತಾರೆ. ಅದು ಪುರಾತನ ಬದುಕಿನ ಕಾನೂನು.**

# ಯೋಚಿಸುವ ಹೊತ್ತು

ಕವಿಗಳಿಬ್ಬರು ಕುಳಿತರು ಮಾತಿಗೆ;
ಓರ್ವ ಕವಿ ಹೇಳಿದ: ಕೋಗಿಲೆ
ಹಾಡುತ್ತಿದೆ ಕೊರಕೊರನೆಂದು
ಅದರ ಗಂಟಲು ಕೆಟ್ಟಿದೆ
ಸೀಮೆಗೊಬ್ಬರಕೆ ಚಿಗಿತ ಚಿಗುರೆಲೆ ತಿಂದು;
ಮನುಷ್ಯನ ಕರುಳು ಮುರುಟಿದೆ,
ಕಳಪೆ ಆಹಾರ ತಿಂದು;
ನಡುಗುತಿದೆ ಹೃದಯ–
ಎದೆಯ ಎಲುಬುಗಳ ಮಧ್ಯೆ;
ಬೀಸಿ ಬರಲಿದೆ ಮನುಷ್ಯ ಕೊರಡಾಗುವ ಚಳಿ,
ಸುರಿಯಲಿದೆ ತಲೆಯ ಮೇಲೆ ಆಮ್ಲಮಳೆ;
ಕಾಣಿಸಿಕೊಳ್ಳುವುದು ಹತ್ತಿರದಲ್ಲೇ–
ಆಕಾಶದಲ್ಲೊಂದು ಭಾರಿ ತೂತು. ಬರಲಿದೆ
ಒಂದೇ ಕೈಯಲ್ಲಿ ಆನೆಯನ್ನೇ ಎತ್ತಿ
ಮುಕ್ಕಿ ತಿನ್ನುವ ಕಲ್ಕಿ.

ಈಗ ಇನ್ನೋರ್ವ ಕವಿ ಹೇಳಿದ:
ಕವಿತೆ ಬರೆಯಲು ಬರಬೇಕು ಅಂತರಂಗದ
ಕರೆಯು, ಸುಲಭವಾಗಿ ದಕ್ಕುವುದಲ್ಲ ಕವಿತೆ;
ಸಿಕ್ಕಿಕೊಳ್ಳುತ್ತವೆ ಯಾವಾಗಲೋ ಒಮ್ಮೆ
ಭಾವಕ್ಕೆ ತಕ್ಕ ಪದ ಪುಂಜಗಳು,
ಕವಿಯು ಅಂತರಂಗಕ್ಕೆ ಕಿವಿಗೊಟ್ಟು,
ಕೈಗೆ ಬರುವ ಮೊದಲೇ

ಜಾರಿ ಬೀಳಬಹುದು ದಾರಿಯ ಮಧ್ಯೆ;
ಹೆಕ್ಕಿಕೊಳ್ಳಬೇಕು ಕಡಲ ಮುತ್ತಿನಂತೆ,
ಕವಿ ಬೆಳೆಯಬೇಕು ಎತ್ತರಕ್ಕೆ –
ಮಣ್ಣಿನ ಶಕ್ತಿ ಹೀರಿ ನಿಲ್ಲುವ ಮರದಂತೆ,
ಕವಿತೆಗೆ ಹೊಸ ಭಾವ ಮೂಡಿ ಬರಬೇಕು;
ವಸಂತದಲ್ಲಿ ಗಿಡ ಮರಗಳು ಚಿಗುರಿದಂತೆ,
ಕಾವ್ಯ ಕೊನರಿ ಬಯಲು ಬೆಟ್ಟಗಳೆಲ್ಲ
ಹರಡಬೇಕು, ಪ್ರೀತಿ ಸಮೃದ್ಧಿಯಾಗಬೇಕು.
ಜಗದ ಕೆನ್ನೆಯ ಮೇಲೆ ಉರುಳುವ
ದು:ಖದ ಹನಿಯ ಅದು ಒರೆಸಬೇಕು.

ಈಗ ಕವಿ, ಕವಿತೆಗಳ ಮಧ್ಯೆ ತುಸು
ಮೌನ; ಕವಿಗಳು ಯೋಚಿಸುವ ಹೊತ್ತು.

# ನೆನೆಪುಗಳು

ಕನಸುಗಳಿಗೆ ಕನ್ನಡಿಗಳು,
ನೆನೆಪುಗಳಿಗೆ ಕಣ್ಣುಗಳು ಇರಲೇಬೇಕು;
ಇಲ್ಲವೆಂದರೆ–
ಮರೆತೆ ಎಂದುಕೊಂಡಿದ್ದು, ಮುಂದೆ ಬರಲಿ
ಅಂದುಕೊಂಡಿದ್ದು, ಕಾಡುತ್ತ ಕೊಸರುತ್ತಾ
ಗಿರಕಿ ಹೊಡೆಯುತ್ತ ಏಕೆ ಸುತ್ತುತ್ತವೆ ನಮ್ಮ
ಸುತ್ತಲೂ–

ನಿರಾಸೆ, ದು:ಖ, ಆವರಿಸಿದಾಗ ಕೈಹಿಡಿದು ನಡೆಸುತ್ತಾ,
ಹೃದಯ ಹಗುರವಾಗಿಸುತ್ತಾ ನಮ್ಮ ಜೊತೆ ಕುಳಿತು
ಏಕೆ ಚಿಂತಿಸುತ್ತವೆ ಬಂಧು ಮಿತ್ರರಂತೆ.
ಉಳಿಯಬಹುದು ಅವು ಹತ್ತಾರು ವರುಷಗಳವರೆಗೆ,
ಕೆಲವು ಉಸಿರಿರುವವರಗೆ; ಇನ್ನೂ ಕೆಲವು
ಕಳೆದುಹೋಗಬಹುದು ಅಬ್ಬೇಪಾರಿಗಳಾಗಿ ಅಲ್ಲಿ ಇಲ್ಲಿ
ರಸ್ತೆಯ ತಿರುವುಗಳಲ್ಲಿ, ಹಳೆ ಬಾವಿಗಳಲ್ಲಿ.

ನೆನಪುಗಳು ಎಲ್ಲಿ ಹೇಗೆ ಕುಳಿತಿರುತ್ತವೆ...?
ಮರೆತೆ ಎಂದು ಊರಾಚೆ ಬಿಟ್ಟು ಬಂದಿದ್ದು–
ಗಕ್ಕನೆ ಎರಗಬಹುದು ನಡುಮನೆಯಲ್ಲಿ
ನೀವೊಬ್ಬರೆ ಬಾಗಿಲು ಮುಚ್ಚಿ ನಿದ್ದೆಯಲ್ಲಿದ್ದಾಗ
ಕಳ್ಳಬೆಕ್ಕಿನಂತೆ; ಎಬ್ಬಿಸಿ ಕೂರಿಸುವ ಕೈಯಿಗಳುಂಟು
ಅವುಗಳಿಗೆ, ಮತ್ತೆ ಮಲಗಿದಾಗ
ಕಾಡಬಹುದು ಕನಸಿನಲ್ಲಿ ಬಂದು.

ಅಪರಿಚಿತ ನಗರದ ಬೀದಿಗಳಲ್ಲಿ,
ಅರಮನೆಯ ಮುಂದಿನ ಬಣ್ಣಬಣ್ಣದ ಹೂವುಗಳಲ್ಲಿ
ನಡೆಸಬಹುದು ಹಳೆಯ ಪ್ರೇಮಿಗಳಂತೆ
ಸರಸ ಸಲ್ಲಾಪ ಕತ್ತಲಲ್ಲಿ; ಯುವತಿಯರ
ಕೆನ್ನೆಗಳ ಮೇಲೆ ಮೊಡವೆಗಳಂತೆ.
ಅದಕ್ಕೆ–
ಕನಸುಗಳಿಗೆ ಕನ್ನಡಗಳು
ನೆನಪುಗಳಿಗೆ ಕಣ್ಣುಗಳು ಇರಲೇಬೇಕು.

ನಾವು ಬದುಕಬಹುದು. ಧರ್ಮವಿಲ್ಲದೆ ಮತ್ತು ಯೋಗ ಮಾಡದೆ
ಆದರೆ ಮನುಷ್ಯನ ಬಾಂಧವ್ಯವನ್ನು ಬಿಟ್ಟು ಬದುಕಲಾರೆವು.
– ದ ಲೈಲಾಮಾ

# ಮನೆ ಬಾಗಿಲು

ಸಾಯಂಕಾಲ
ನೆಲದಿಂದ ಮೇಲಕ್ಕೆ-
ಹತ್ತು ಮೆಟ್ಟಿಲು ಹತ್ತಿಹೋದರೆ
ನಾನು ಬರುವ ನಿರೀಕ್ಷೆ ಎದುರು
ನೋಡುವ ಮನೆ ಬಾಗಿಲು,
ಮುಂದೆ ರಂಗೋಲಿ ಚಿತ್ತಾರ;
ಒಳಗೆ ಕುಳಿತು ಕಾಯುತ್ತಿರುವ ಕುರ್ಚಿ-ಕೈಕಾಲು,
ದಿವಾನಾ ಮೇಲೆ ಸುಗಂಧ ಚೆಲ್ಲುವ
ಒಂದು ಗೊಂಚಲು ರಜನಿಗಂಧ;
ಹೆಜ್ಜೆ ಮೇಲೆ ಹೆಜ್ಜೆ ಇಟ್ಟು ಮನೆಯಲ್ಲಾ
ನಡೆದಾಡುವ ಗೆಜ್ಜೆಗಳು.

ಗೋಡೆಯ ಹಣೆಯಲ್ಲಿ ಟಿಕ್... ಟಿಕ್...
ಎಂದು ಸಾಗುತ್ತಿರುವ ಕಾಲದ ಬಿಳ್ಳೆ.
ಬಟ್ಟೆ ಕಳಚಿ ಕೈಕಾಲು ತೊಳೆದು-
ಒಂದಷ್ಟು ಕಾಫೀಯೋ ಟೀಯೋ ಕುಡಿದು
ಕುಳಿತು ಯೋಚಿಸುತ್ತೇನೆ-
ಕವಿತೆ ಬೋರ್ಗರೆಯುವ ನಿರೀಕ್ಷೆಯಲ್ಲಿ;
ನಡುವೆ ಫೋನ್ ಶಬ್ದ,
'ಅಡಿಗೆ ಮಾಡುವುದು... ಪಾತ್ರೆ ತೊಳೆಯುವುದು...
ಬಟ್ಟೆ ಒಗೆಯುವುದು... ಹುಟ್ಟಿದರೆ
ಗಂಡಸರಾಗಿ ಹುಟ್ಟಬೇಕು ನೋಡ್ರೀ'
ಎದುರಿಗೆ ಕುಳಿತು ನಿಟ್ಟುಸಿರುಡುವ ಸುಶೀಲ,
ತೊಡೆಯ ಮೇಲೆ ಆಡುತ್ತಿದ್ದ ಕ್ರಾಂತಿ

ತನ್ನಷ್ಟೇ ಎತ್ತರವಾಗಿ ಬೆಳೆದಿರುವನು;
ಗೋಡೆಯ ಮೇಲೆ ಅರುಣೋದಯದ ಓಕುಳಿ;
ಬೆಳಿಗ್ಗೆ ಹತ್ತು ಮೆಟ್ಟಿಲು ಇಳಿದೋದರೆ
ಬೆಂಗಳೂರಿನ ರಸ್ತೆಗಳು
ಬರಮಾಡಿಕೊಳ್ಳುತ್ತವೆ ಮತ್ತೆ ಎಂದಿನಂತೆ.

❋

> ಮನೆಯವರ ಜೊತೆಗೆ ಒಳ್ಳೆ ಸಂಬಂಧ ಇಟ್ಟುಕೊಂಡಿರುವವರ
> ಗೌರವ ಹೊರಗೆ ಇನ್ನೂ ಘನತೆಯಿಂದ ಕೂಡಿರುತ್ತದೆ.
>
> – ಜಿಗ್ ಜಾಗ್ಲರ್

# ಮನೆಯಂಗಳ

ಸೂರ್ಯನು
ವಸುಂಧರೆಯ ಸ್ಪರ್ಶಿಸುವ ಮುನ್ನ
ಮನೆಯಂಗಳಕ್ಕೆ ಬರುವ ಸುಶೀಲ-
ಕಸ ಗುಡಿಸಿ, ತಂಪು ಕಿರಣಗಳ
ನೀರು ಚುಮುಕಿಸಿ, ರಂಗೋಲಿ
ಬಿಡಿಸುವಳು ಬೀದಿಯವರೆಗೆ-
ಯಾರೂ ತುಳಿಯದಂತೆ ನಿಗಾವಹಿಸಿ
ಅಲ್ಲೇ ನಿಲ್ಲುವಳು, ಕೆಲವರಾದರೂ
ನೋಡಿ ಮೆಚ್ಚಿಗೆ ಸೂಚಿಸುವವರೆಗೂ.
ವೀಳ್ಯದೆಲೆ-ಅಡಿಕೆ, ಒಂದೆರಡು ಬಾಳೆಹಣ್ಣು
ಶುಕ್ರವಾರದ ಪೂಜೆಗೆ ತರುವಂತೆ
ಕ್ರಾಂತಿಗೆ ಹೇಳಿ ಹೇಳಿ ಅವನನ್ನು ಹಾಸಿಗೆಯಿಂದ
ಬೇರ್ಪಡಿಸಲಾಗದೆ,
ಆ ಕೆಲಸ ನನ್ನ ಮೇಲೆ ಬೀಳುತ್ತದೆ.

ಈ ನಡುವೆ ಕನ್ನಡ ಚಿತ್ರಗೀತೆಗಳಿಗೆ
ಕಿವಿಕೊಟ್ಟು, ಕನ್ನಡ ಪ್ರಭ ಮೇಲೆ ಕಣ್ಣಾಡಿಸುತ್ತ-
ಒಂದೆರಡು ಗುಟುಕು ಟೀ/ಕಾಫಿ ಗುಟುಕರಿಸುತ್ತ-
ಯಾವುದೋ ವಸ್ತು, ಒಡವೆ ಹೊಸ ಬಟ್ಟೆಗೆ
ಗಾಳ ಹಾಕಿ ನೋಡಿ-
ಮೀನು ಬುಟ್ಟಿಗೆ ಬೀಳದಾಗ
ಒಳಗೊಳಗೆ ಉಪಾಯ ಹೂಡುತ್ತ

ಇಡ್ಲಿ ದೋಸೆ ಇಲ್ಲ ಕಾಂಕ್ರೆಟ್ ತಿನ್ನಲು ಕೊಟ್ಟು,
ಗೆಳತಿಯರ ಜೊತೆಗೆ ಯಾವುದೋ ಕಾರ್ಯಕ್ರಮ
ಹಾಕಿಕೊಂಡು, ಕೊಟ್ಟ ಹಣಕ್ಕಿಂತ
ಒಂದೆರಡು ಪಟ್ಟು ಹೆಚ್ಚು ಲೆಕ್ಕ ಬರೆದು,
ತಿಂಗಳ ಕೊನೆಯಲ್ಲಿ ಡಿಪಿಸಿಟ್ ಬಜೆಟ್ ತೋರಿಸಿ,
ಸರಿಯಾದ ಸಮಯದಲ್ಲಿ ಸ್ಯಾಂಕ್ಷನ್
ಪಡೆದುಕೊಳ್ಳುವುದು ಮಾಮೂಲಿ.

ನನಗಿಂತ ಒಂದೆರಡು ಕೇಜಿ ಹೆಚ್ಚು
ತೂಗುವ ಸುಶೀಲ, 'ನೀವೇನೆ ಮಾಡಿ...
ನನ್ನಿಂದ ಮುಚ್ಚಿಡಬೇಡಿ ಹುಷಾರ್!' ಎಂದು
ಎಚ್ಚರಿಕೆಯ ಗಂಟೆ ಬಾರಿಸುತ್ತಲೇ ಇರುತ್ತಾಳೆ
ಆಗಾಗ.
ನಾನೂ ಅಷ್ಟೇ ತೊಂದರೆ ಬಂದಾಗ
ಆಣೆ-ಪ್ರಮಾಣ ಮಾಡಿಯಾದರೂ
ತಲೆ ಉಳಿಸಿಕೊಳ್ಳುತ್ತಲೇ ಬಂದಿದ್ದೇನೆ
ಇಲ್ಲಿಯವರೆಗೆ; ಎಲ್ಲವೂ
ಹೇಳಿಬಿಡುವ ಗಂಡಸಿಗೆ ನಿಜವಾಗಿಯೂ
ಉಳಿಗಾಲ ಉಂಟೆ ಮಹಿಳಾ ಲೋಕದಲ್ಲಿ?



ಮನೆ ಎಲ್ಲಿರುತ್ತದೋ ಅಲ್ಲಿ ಹೃದಯವೂ ಇರುತ್ತದೆ.

– ಪ್ಲಿನಿ

## ನೆಲದಾಸಿಗೆ

ನೆಲದಾಸಿಗೆ–
ಕಲ್ಲುಬಳ್ಳಿಗಳ ಊರು, ವೈಶಾಖದ ಶಾಖ
ಇಳೆಯ ಬೇಯಿಸುವುದು ತಾರಾಮಾರ,
ಹಿಂದೆಯೆ ಮಳೆ ಸುರಿದು–
ನೆಲ ಗಮ್ಮನೆ ಬಿರಿಯುವುದು,
ಬೆವರು ಧಾರೆಯ ಗುದ್ದಲಿಯಿಂದ
ಭೂದೇವಿಯ ಮಡಿಲೊಳಗೆ
ಇಳಿಯುವುದು ಒಂದೊಂದೇ ಬೀಜ;
ಆಕಾಶದಲ್ಲಿ ತನ್ನೂರು–
ಪಾತಾಳದಲ್ಲಿ ಅದರ ಬೇರು.
ನೆತ್ತಿಯ ಮೇಲೆ ನವಿಲುಗರಿ; ಹರೆಯ
ಮೈತುಂಬಾ ಸವರಿ–
ಎಷ್ಟೋ ವರ್ಷಗಳಿಂದ ಅವಿತಿಟ್ಟ ಮನಸ್ಸು,
ಕಣ್ಣು ತುಂಬಾ ಕಾಮನ ಬಿಲ್ಲು–
ಅತ್ತರಿನ ಜೊತೆ ಪ್ರೀತಿಯ ಉಸಿರು,
ಕೋಟು ಬೂಟು ಕೈಕಾಲು ದೇಹವ ಸುತ್ತಿ ಬಳಸಿ
ಲಾಲಿ ಹಾಡುವುದು ಗಾಳಿ;
ಇಂಕಿನಲ್ಲಿ ಇಳಿದ ಅಕ್ಷರಗಳು

ಪುಸ್ತಕದ ಹಾಳೆಗಳ ಮೇಲೆ
ಹರಿದಾಡಿದವು ಕೋಟಿ ಕೋಟಿ ಭಾವಗಳಾಗಿ;
ಮುಟ್ಟಿಸಿಕೊಂಡವರ ಒಡಲೊಳಗೆ
ಗಟ್ಟಿ ಶಬ್ದಗಳಾಗಿ.



ಕಾರ್ಮಿಕನಿಲ್ಲದೆ ಈ ಪ್ರಪಂಚ ಬೆಳಕು ಕಾಣುತ್ತಿರಲಿಲ್ಲ.

# ಹೀಗೆ ಮಲಗಿ ನಿದ್ದೆ ಮಾಡುತ್ತಿದ್ದಾಗ

ಬೆಳಗಿನ ಜಾವ ಹಿತವಾದ ಕನಸು–
ಬ್ರಾಹ್ಮಣರ ಹುಡುಗಿ, ಆ ಕಾಲಕ್ಕೆ ಬೆಡಗಿ
ಮನೆ ಮುಂದೆ ನಿಂತಿದ್ದಳು;
'ನನ್ನ ಜ್ಞಾಪಕ ಇದೆಯೇ?' ಕೇಳಿದೆ.
'ನೋಡಿದ ಮುಖವೇ...?
ಆಗಲೇ ನಾವು ಗೆಳೆಯರಲ್ಲವೇ?
ಎಲ್ಲಿ ಕಳೆದೋಗಿದ್ದಿರಿ... ಇಷ್ಟು ದಿನ?
ನಿಮ್ಮ ಮೊಬೈಲ್ ಸಂಖ್ಯೆಯೂ ಇಲ್ಲ ನನ್ನಲ್ಲಿ'
ಕೈಯಲ್ಲಿ ಕಟ್ಟಿಗೆ ಮುರಿಯುತ್ತ' ಕೇಳಿದಳು.

'ಸಾಯಂಕಾಲ ಸಿಗ್ತಿಯೇನು...?' ಕೇಳಿದೆ.
'ಈ ದಿನವೇ...?'
'ಹೌದು!' ನನ್ನನೊಮ್ಮೆ ದಿಟ್ಟಿಸಿ ನೋಡಿದಳು.
ಅದೇ ತುಟಿ ಅದೇ ಕಣ್ಣು ಕೆನ್ನೆ ಗಲ್ಲ ಮೂಗು
ಆಯಸ್ಕಾಂತದಂತೆ ಆಕರ್ಷಿಸುವ ಸುಂದರ ಮುಖ;
ಅದು ಬೆಳದಿಂಗಳ ರಾತ್ರಿಯೋ?
ಬೆಳಗಿನ ಹೊತ್ತೋ? ಸಾಯಂಕಾಲವೊ ತಿಳಿಯಲಿಲ್ಲ.

ಅಷ್ಟರಲ್ಲಿ ಅವಳ ಅಕ್ಕ ನೀರಿನ ಕೊಡ ಹೊತ್ತು
ಬರುತ್ತಿದ್ದಳು, ನನ್ನ ತಲೆಯಲ್ಲಿ ಇವಳೂ ಸಹ
ಎಲ್ಲೋ ಕುಳಿತಿದ್ದಳು. ಕಣ್ಣಲ್ಲೆ ಸನ್ನೆ ಮಾಡಿದೆ.
ಆ ಹಳೆ ಗೆಳತಿ ಅರೆಕ್ಷಣ ಮಾತು ನಿಲ್ಲಿಸಿ

ಯಾವುದೋ ಕೆಲಸದಲ್ಲಿ ಮಗ್ನಳಾದಳು.
ಈಗ ನಾನ್ಯಾರೋ ರಸ್ತೆಯಲ್ಲಿ ನಿಂತಿರುವವನಂತೆ
ಅವಳು ನಟಿಸಿದಳು. ಕ್ಷಣಾರ್ಧದಲ್ಲಿ ಮೆದುಳು
ಫ್ಯೂಸ್ ಆಗಿ ಅಲ್ಲಿಗೆ ಮುರಿದುಕೊಂಡಿತು
ದೂರದರ್ಶನದ ಜಾಹೀರಾತಿನಂತೆ, ನನ್ನ ಕನಸು.

ನನ್ನ ಮೊಬೈಲ್ ಸಂಖ್ಯೆ ತಿಳಿಸಬೇಕಿತ್ತು,
ಈಗಲಾದರೂ ಅವಳಿಗೆ ತಿಳಿದಿರಬಹುದೇ?
ತಿಳಿದಿದ್ದರೆ ಮೊಬೈಲ್ ಹಾಯಿಸಬಹುದೆ? ನನ್ನ
ಮೆಮೊರಿ ಕಣಗಳಲ್ಲಿ ಅವಳು ಎಲ್ಲಿರುವಳೋ?
ಹೆಕ್ಕಿ ತೆಗೆಯಲು ಯೋಚಿಸಿದೆ. ಹ್ಞೂ ಹ್ಞೂ;
ಹೊಳೆಯಲಿಲ್ಲ, ಹತ್ತಿರಕ್ಕೂ ಸುಳಿಯಲಿಲ್ಲ,
ಅವಳ ವಿಳಾಸ ಕೂಡ ದಕ್ಕಲಿಲ್ಲ.
ನನ್ನ ಮಿದುಳಿನ ಕೋಟಿ ಕೋಟಿ ಕಣಗಳಲ್ಲಿ
ಆ ಕಣಗಳು ಯಾವುವೆಂದು ಯೋಚಿಸಲಿ...?

ಹೀಗೆ ಮಲಗಿ ನಿದ್ದೆ ಮಾಡುತ್ತಿದ್ದಾಗ–
ಯಾವುದೋ ಕಥೆ ಓದುತ್ತಿದ್ದಾಗ, ರಸ್ತೆಯಲ್ಲಿ
ಸಾವಿರಾರು ಮುಖಗಳು ನಡೆದು ಹೋಗುತ್ತಿದ್ದಾಗ,
ಶಾಲೆ ಕಾಲೇಜು ರಸ್ತೆ ಬೀದಿ, ಕಳೆದುಹೋದ ವಸ್ತುಗಳು,
ಬಸ್ಸು, ರೈಲು, ವಿಮಾನ, ಗುಡಿ–ಗೋಪುರಗಳು
ಕಾಡು ಕಣಿವೆ ಪ್ರದೇಶಗಳು–

ನಮ್ಮ ಸುತ್ತಲು ಕುಳಿತು ಮಲಗಿ ಎದ್ದುಬಿದ್ದು ಹಾದುಹೋದ
ಸಂಬಂಧಗಳು ತಟ್ಟನೆ ಯಾವುದೊ ಘಳಿಗೆಯಲ್ಲಿ
ನಮ್ಮ ಮೆದುಳ ಕಣಗಳಲ್ಲಿ ಮುದ್ರಿತಗೊಂಡು
ನಮ್ಮ ಜೊತೆಗೆ ಕುಂತೂ ನಿಂತೂ ಕೂಡಿ ಬಾಳುವ
ಭೂತ ಭವಿಷ್ಯದ ಜೀವ ತೈಲವಾಗಿ–
ನಮ್ಮ ಜೊತೆಗೆ ಈ ಕಣಗಳು ಇಲ್ಲದೆ ಹೋಗಿದ್ದರೆ–

ಮನುಷ್ಯನಿಗೂ ಜಡವಸ್ತುವಿಗೂ
ವ್ಯತ್ಯಾಸವೆ ಇರುತ್ತಿರಲಿಲ್ಲ. ನೀವು,
ನಿಮ್ಮ ಪತ್ನಿ ಮಕ್ಕಳನ್ನು, ಅಕ್ಕ ತಂಗಿ ತಾಯಿ ತಂದೆ
ಗೆಳೆಯರನ್ನು ಗುರುತಿಸುತ್ತಿರಲಿಲ್ಲ;
ಗಿಡಮರಗಳಂತೆ ಬೆಳೆದು ನಿಂತು, ಕೆರೆ ಕುಂಟೆಗಳಂತೆ
ಅಲ್ಲೆ ನಿಂತು, ಎಲ್ಲೆಂದರಲ್ಲಿ ಶಿಲೆಗಳಂತೆ ಎದ್ದುನಿಂತು
ಕಾಲದ ನೆನಪಿನಲ್ಲಿ ಕಳೆದುಹೋಗುತ್ತಿದ್ದಿರಿ.



ನಿಮ್ಮನ್ನು ಪ್ರೀತಿಸುವವರನ್ನು ನೀವು ಪ್ರೀತಿಸುವುದೇ
ಅತ್ಯಂತ ಶ್ರೇಷ್ಠ ವಿಷಯ.

## ಬಿಳಿ ಅನಾಥರು

ಆಕಾಶ–
ಬಿಳಿ ಕೊಕ್ಕರೆಯ
ಕೆಳ ಹೊಟ್ಟೆಯ ಮೃದು ನೀಲಿ;
ಸುತ್ತಲೂ ಗರಿಕೆ ಕಾರೆ ಕುರುಚಲು ರಾಗಿ ಹೊಲಗಳು;
ಚುಕ್ಕೆ ಇಲ್ಲದ ಅದೇ ಕಡುಕಪ್ಪು ನೆಲ–
ಹೆದರಿ ನಿಂತಿರುವ ಮಲ್ಲಪ್ಪ–ಬ್ಯಾಟರಾಯನಬೆಟ್ಟಗಳ
ಅಂತರಂಗದ ತುಂಬಾ ಖಾಲಿ ಖಾಲಿ ಸುರಂಗಗಳು.

ಇಲ್ಲಿನ ಜನ, ಯುಗ–
ಯುಗಾದಿಗೂ ಮಸಣಕ್ಕೆ ತೆರಳಿ
ತಮ್ಮ ಪೂರ್ವಜರಿಗೆ ಪ್ರಿಯವಾದುದೆಲ್ಲ
ಎಡೆಯಲ್ಲಿಟ್ಟು ಕರೆಯುತ್ತಾರೆ
ಕಾವ್... ಕಾವ್... ಎಂದು
ಅವರು ಸ್ವರ್ಗದಿಂದ ಬಂದು ಕೊಕ್ಕಿನಲ್ಲಿ
ಕುಕ್ಕಿ ಸಂತೃಪ್ತಿ ಪಡೆದು ಹೋಗುವವರೆಗೆ
ನಿಲ್ಲುತ್ತಾರೆ ಮಸಣದಲ್ಲಿ.

ಅಲ್ಲೇ ಅನತಿ
ದೂರದಲ್ಲಿ ಸುಡುಗಾಡು ನೆಲದಲ್ಲಿ
ಹಳ್ಳ ಗುಂಡಿಗಳ ಸ್ಮಶಾಣದಲ್ಲಿ ನೆರೆದಿದ್ದಾರೆ
ಕೇಳುವವರಿಲ್ಲದೆ– ತರಾವರಿ ಬಿಳಿಯ ಜನರು;
ಗುಲಾಬಿ ಎಂದರೆ ಕಣ್ಣು ಕಣ್ಣುಬಿಡುವ–

ಇವರ ಎದೆಯ ಮೇಲೆ ಯಾರೂ ಇಡುತ್ತಿಲ್ಲ
ವರ್ಷಕ್ಕೊಂದು ಕಣಗಿಲೆ ಹೂವು ಕೂಡ;
ಇಂಡಿಯಾದಲ್ಲೊಂದು 'ಲಿಟ್ಲ್ ಇಂಗ್ಲೆಂಡ್'
ಸ್ಥಾಪಿಸಿದ ಸಾಧಾರಣ ಅನಾಥರಿವರು.

ಎಲ್ಲಿಂದಲೊ ಬಂದು
ಇಲ್ಲಿ ಪರದೇಶಿಗಳಾದ ಇವರು
ತಮ್ಮ ನೆಲ ಜಲ ಪ್ರೀತಿಯ ಮಕ್ಕಳ ತೊರೆದು,
'ಸೂರ್ಯ ಮುಳುಗದ ನಾಡು'
ವಿಸ್ತರಿಸಲು ಗಾಳಿ ಬೆಳಕಿನ ಮೇಲೆ ಬಂದವರು
ಬಲುದೂರದಿಂದ; ಹೊನ್ನಿನ ಕಣಜ
ಖಾಲಿಯಾಗಿ ಕೋಲಾರ ಚಿನ್ನದ ಗಣಿಗಳು
ಕಣ್ಣು ಮುಚ್ಚಿ ಕುಳಿತಾಗ–
ಭಗ್ನಾವಶೇಷಗಳು ಚರಿತ್ರೆಯ ಪುಟಗಳು
ಸೇರಿದಾಗ–
ಗುಲ್‌ಮೊಹರ್ ಮರಗಳು ಮಾತ್ರ
ಶೋಕಿಸಿದ್ದವು ಸಾಲಾಗಿ ನಿಂತು ಇವರಿಗಾಗಿ.
ಮಲಗಿದ್ದಾರೆ... ಬಿಳಿಯರು ಇಲ್ಲಿ
ಹರಳುಕಲ್ಲು, ಚಿನ್ನದ ಉಂಗುರ
ಬಂಗಾರದ ಹಲ್ಲುಗಳೊಂದಿಗೆ ಎಂದಾಗ–
ಯಾರೋ ಕಿಡಿಗೇಡಿಗಳು; ಗುಂಡಿಗಳ ಬಗೆದು,
ಮಲಗಿದ್ದವರ ಎತ್ತಿ ನಿಲ್ಲಿಸಿ, ಮಣ್ಣು ಜಾಡಿಸಿ
ಎಲುಬುಗಳ ಎಣಿಸಿದಾಗ– ಅವರ
ಹುಟ್ಟು ಸಾವು ಊರು ತೇದಿಗಳೊತ್ತ
ಕಲ್ಲುಗಳು ಅವಕ್ಕಾಗಿ–
ಬೋರಲು ಬಿದ್ದಿವೆ ದಿಕ್ಕದಿಕ್ಕಿಗೆ.



> ನಾವು ಯುದ್ಧವನ್ನು ಮುಗಿಸದಿದ್ದರೆ, ಯುದ್ಧವೇ
> ನಮ್ಮನ್ನು ಮುಗಿಸುತ್ತದೆ.

# ಲಿಟ್ಲ್ ಇಂಗ್ಲೆಂಡ್

ಚರಿತ್ರೆ–
ವೇದ ಕಾಲದಿಂದ
ಟಿಪ್ಪು ಸುಲ್ತಾನ್‌ವರೆಗೆ, ಹರಪ್ಪ
ಮೆಹಂಜೋದಾರೊ, ಈಜಿಪ್ಟ್‌ನವರೆಗೆ ಹೋಗಿಬಂದಿತ್ತು
ನವಿಲು ನಾಡಿನ ಚಿನ್ನದ ಚರಿತ್ರೆ –
ಸೂರ್ಯ ಮುಳುಗದ ನಾಡಿಗೆ ನೇರ ದೂರವಾಣಿ,
ಏಷಿಯಾದಲ್ಲೆ ಮೊದಲಿಗೆ ವಿದ್ಯುತ್ ಪಡೆದ ಖ್ಯಾತಿ;
ಕನ್ನಡ ನಾಡು ಚಿನ್ನದ ಬೀಡು–
ವಿಶ್ವದ ಅತ್ಯಂತ ಆಳದ ಗಣಿಗಳು;
'ಲಿಟ್ಲ್ ಇಂಗ್ಲೆಂಡ್' ಎಂಬ ಹೆಗ್ಗಳಿಕೆ ಹೀಗೆ...
ಎಲ್ಲವೂ ಇತ್ತು ಈ ಕಪ್ಪು ನೆಲದ ಒಡಲ ಸಿರಿಗೆ;
ಟನ್ನುಗಟ್ಟಲೆ ಮೊಗೆದುಕೊಟ್ಟ ಚಿನ್ನದ ತಿಜೋರಿಗೆ
ಬೀಗ ಬಿದ್ದು ಸ್ತಬ್ಧಗೊಂಡಿತು ಎರಡು ಸಾವಿರದ
ಒಂದನೇ ವರ್ಷದ ಒಂದು ದಿನ.
ಕೊನೆಗೆ ಉಳಿದಿದ್ದು ಒಂದು ನಿಟ್ಟುಸಿರು,
ಬಿಳಿಯರು ಬಿಟ್ಹೋದ ಒಂದು ನೆನಪು ಮಾತ್ರ.

ಅಂದು–
ಸಾವಿರಾರು ಅಡಿಗಳ ಕೆಳಗೆ
ಆಳದೊಳಗೆ ಭೂಮಿ–ಪಾತಾಳದ ಮಧ್ಯೆ
ಎಲುಬುಗಳ ಏಣಿ ಹಾಕಿ ಕಪ್ಪು ಶಿಲೆಗಳ ಬೆನ್ನೊತ್ತು
ಕತ್ತಲಿಗೆ ಬೆಳಕ ತಂದರೂ, ಕಪ್ಪು ಜನರ ಬದುಕು
ಹಸನಾಗಲಿಲ್ಲ, ಅವರ ಮುಖಗಳಲ್ಲಿ

ಚಿನ್ನ ಎಂದೂ ಹೊಳೆಯಲಿಲ್ಲ.
ಚಿನ್ನದ ಶಿಲೆಗಳ ನುಜ್ಜುಗುಜ್ಜೆಸೆದ
ವಿಷ ಸೈಯನಾಡ್ ಗುಡ್ಡಗಳು–
ಹಿಮಾಲಯ ಆಲ್ಪ್ಸ್ ರಾಶಿಗಳ ಮೀರಿ
ಸುಯ್ಯನೆದ್ದ ಸೈಯನಾಡ್‌ನಲ್ಲಿ ಅವರ ಜೋಪಡಿಗಳು
ಸಹರಾ, ರಾಮೇಶ್ವರಗಳಾದವು.

ಇಂದು–
ಉಳಿದಿದ್ದು ವಿಷ ಗಾಳಿ ನೀರು;
ಎದೆಯ ಮೇಲೆ ಬಣಗುಡುವ ಸುಡುಗಾಡು–
ಸುರಂಗಗಳಲ್ಲಿ ಸಿಕ್ಕಿಕೊಂಡವರ ಆಕ್ರಂದನ,
ಕಲ್ಲುಕಲ್ಲಿನಲ್ಲೂ ಭೂಕಂಪನ;
ತಲೆ ತಗ್ಗಿಸಿ ನಿಂತಿರುವ ಶಾಫ್ಟ್‌ಗಳು,
ಹೂವು ಮುಡಿಯದ ಗುಲ್‌ಮೊಹರ್
ಸಾಲುಮರಗಳು, ಪಾಳು ಬಿದ್ದ ಬಂಗಲೆಗಳು–
ಬತ್ತಿಹೋದ ಪಿಳಿಪಿಳಿ ಕಣ್ಣುಗಳು;
ಯಾರೂ ನೋಡಲಾಗದ
'ಲಿಟ್ಲ್ ಇಂಗ್ಲೆಂಡ್'
ಇಂದು ಗೋಸ್ಟ್ ಸಿಟಿ.

ಸ್ವಾತಂತ್ರ ಪೂರ್ವದಲ್ಲಿ ಕೋಲಾರ ಚಿನ್ನದ ಗಣಿಗಳು
ಲಿಟ್ಲ್ ಇಂಗ್ಲೆಂಡ್ ಎಂದೇ ಖ್ಯಾತಿ ಪಡೆದಿದ್ದವು.

# ಕೃಷ್ಣರಂಧ್ರಗಳ ಕೇಳಿ

ಸುಡುಗಾಡು ಮುಖದ ಸೂರ್ಯನಿಗೆ
ಹತ್ತು ಪ್ಲಸ್ ಒಂದು ಹನ್ನೊಂದು ಮಕ್ಕಳು
ಅದರಲ್ಲಿ ಎರಡು ಅಂಗವಿಕಲ; ಒಬ್ಬ ಓಡಿಹೋದ;
ಇವರಿಗೆಲ್ಲಾ ಉಂಟು ಊರೂರಿನಲ್ಲೂ
ಪತ್ನಿ, ಉಪ ಪತ್ನಿಯರು;
ಬೆಂಕಿಯ ಸಂಗ ಮಾಡಿದ ಆ ಮಹಾ
ತಾಯಿಯಾದರೂ ಯಾರೋ...?

ಭರತನ ವಂಶದ ಕಲಹದಲ್ಲಿ
ಸುರಿದ ರಕ್ತ, ಚಲ್ಲಾಪಿಲ್ಲಿಯಾದ ಪಾರ್ಥಿವ
ಶರೀರಗಳು, ಬಿದ್ದೋದ ರಾಜ್ಯಗಳೆಷ್ಟೋ?
ಎಲ್ಲವೂ ಅನಾಥ ಸ್ಪೇಸ್ ಡೆಬ್ರಿಯಲ್ಲಿ.

ಅಣುರಣಗಳ ಹೊತ್ತು ತರುವ
ಯಾವುದೋ ಲೋಕದ ಉರಿಯುವ ಬತ್ತಿಗಳು
ಬಂದು ಬೀಳುತ್ತಿವೆ ನಿರಂತರವಾಗಿ ಪೃಥ್ವಿಯ ಕಕ್ಷೆಗೆ.
ಹಾರುವ ವಿಮಾನ, ಅದ್ಭುತ ಸ್ಮಾರಕಗಳು
ಟ್ಯೂಬಿನಲ್ಲೊಂದು ಬೇಬಿ, ಇಂಟರ್‌ನೆಟ್
ಮಯಾಜಾಲ ಸೃಷ್ಟಿಸಿದ ಮಾನವ
ಬೀಗುತ್ತಾನೆ ಹೆಮ್ಮೆಯಿಂದ–

ಮೀನಿನಲ್ಲಿ ಕಪ್ಪೆ ಕಾಲು, ಹಾವಿನಲ್ಲಿ
ಘಡಂಭೂತದ ಗೋಣು, ಬೆಕ್ಕಿನಲ್ಲಿ
ಹುಲಿಯ ಉಗುರು, ಪೆಂಗ್ವಿನ್‌ನಲ್ಲಿ
ಕುದುರೆ ಗೊರಸು–
ಮನುಷ್ಯನಲ್ಲಿ ಮಂಗನ ಬುದ್ಧಿ–
ಇದನ್ನೆಲ್ಲ ಯಾವಾಗಲೊ ಸೃಷ್ಟಿಸಿ ಕುಳಿತಿದೆ
ಪ್ರಕೃತಿ;–

ಮುನಿಸಿಕೊಂಡಾಗ–
ಕಡಲ ದಂಡೆಗೆ ಸುನಾಮಿ, ಚಂಡಮಾರುತ;
ಭೂಮಿಗೆ ಭೂಕಂಪ, ಜ್ವಾಲಾಮುಖಿ, ನೆರೆ,
ಅತಿವೃಷ್ಠಿ ಅನಾವೃಷ್ಠಿ–
ಭೂಮಿ ಹುಟ್ಟಿದಾಗಿನಿಂದಲೂ ಇದ್ದುದ್ದೇ ಇದೆಲ್ಲ
ಹೊಸದೇನು ಎನ್ನುತ್ತೀರಾ...?
ಹುಟ್ಟು... ಯವ್ವನ... ಮುಪ್ಪು... ಸಾವಿನ ಮಾಯೆ
ಭೂಮಿಗೂ ಬಿಟ್ಟಿದ್ದಲ್ಲ ಬೇಕಿದ್ದರೆ ಕೇಳಿ
ಪೊ. ಸಿ. ಚಂದ್ರಶೇಕರ್ ತೋರಿಸಿದ ಕೃಷ್ಣರಂಧ್ರಗಳ.



> ಕಪ್ಪು ರಂಧ್ರಗಳೆಂದರೆ ದೇವರು ಅಲ್ಲಿ
> ಸೊನ್ನೆಯಿಂದ ಗುಣಿಸಿರುವುದು.
>
> – ಐನ್‌ಸ್ಟೈನ್

# ಮಿದುಳು ಕಾಯಿ

ಮಾನವನ ತಲೆ–
ಹತ್ತು ಬಿಲಿಯ ಕಾಂಡಕೋಶಗಳ
ಮಿದುಳು ಕಾಯಿ;
ಅವನ ದೇಹದ ಎಲ್ಲಾ ಕೋಶಗಳ
ಡಿಎನ್ಎ ಬಿಚ್ಚಿ ಹೂಮಾಲೆ ಕಟ್ಟಿದರೆ
ಹೋಗಿ ಬರಬಹುದು ಚಂದ್ರನಲ್ಲಿಗೆ;
ಎಂಟು ಸಾವಿರ ಬಾರಿ.

ಬಿಳಿ–ಕೆಂಪು ಬಸ್ಸುಗಳು
ಓಡುವ ರಕ್ತನಾಳಗಳ ರಸ್ತೆ
ಒಂದೂಕಾಲು ಲಕ್ಷ ಕಿ.ಮೀ. ಉದ್ದವಾದರೆ,
ಇನ್ನೂರು ಆರು ಎಲುಬು, ಮೂವತ್ತಾರು ಕೀಲುಗಳ
ಮಾನವ ದೇಹ ಬರೀ ಮೂಳೆ ಮಾಂಸದ ತಡಿಕೆ.

ಅವನ ಮುಷ್ಠಿ ಗಾತ್ರದ ಪುಟ್ಟ ಹೃದಯ
ಇನ್ನೂರಾ ಐವತ್ತು ಕೋಟಿ ಸಲ
ಲಬ್ ಡಬ್... ಲಬ್ ಡಬ್... ಎಂದು ಹೊಡೆದುಕೊಂಡರೆ;
ಕಣ್ಣಿನ ಕದಗಳು–
ಇನ್ನೂರು ಕೋಟಿ ಸಲ ತೆರೆದು ಮುಚ್ಚಿ ಕಾವಲು
ಕಾಯುತ್ತವೆ ಕಣ್ಣುಗಳ;
ಉದರವೆಂಬ ಚರ್ಮದ ಚೀಲ–

ಐವತ್ತು ಸಾವಿರ ಟನ್ ಆಹಾರ ಧಾನ್ಯ ಮೆದ್ದು
ಅಷ್ಟೇ ಲೀಟರ್ ನೀರು ಕುಡಿದು
ಇಲ್ಲವಾಗಿಸಿದರೆ; ಶ್ವಾಸ
ಮೂವತ್ತು ಕೋಟಿ ಲೀಟರ್ ಇಂಗಾಲ ಮಾನೋಆಕ್ಸೈಡ್
ಹೊರ ಚೆಲ್ಲುವುದು ಪುಪ್ಪಸ.

ಮೂರಡಿ ಉದ್ದದ ಎರಡು ಕ್ಯಾಲ್ಸಿಯಂ–ಫಾಸ್ಫರಸ್ ಕೋಲುಗಳು
ಮೂವತ್ತು ಲಕ್ಷ ಕಿ.ಮೀ ದಾರಿ ಸವೆದರೆ;
ತುಟಿಗಳು ಉದರಿಸುತ್ತವೆ ಐವತ್ತು ಕೋಟಿ ಮಾತುಗಳ;
ಪ್ರೀತಿ ಅಪ್ಪುಗೆಯಲಿ ಕೋಟಿ ನಕ್ಷತ್ರಗಳು ಮಿನುಗಿ–
ಒಂದೊ ಎರಡೊ ಬದುಕಿ ಉಳಿದೇ
ಆರುನೂರ ಐವತ್ತು ಕೋಟಿ ದಾಟಿದೆ
ಈ ಜಗದ ಆಬಾಧಿ.



ಈ ಪದ್ಯ ಓದುವಾಗ ಒಬ್ಬ ಮನುಷ್ಯನ ಸರಾಸರಿ
ಆಯುಷ್ಯ 65 ವರ್ಷ ಎಂದುಕೊಳ್ಳುವುದು.

# ಮಾಯಾಜಾಲ

ಕಂಪ್ಯೂಟರ್–ಇಂಟರ್‌ನೆಟ್
ಮದುವೆ ನಡೆಯಿತು ಅಂತರಿಕ್ಷದಲ್ಲಿ;
ನನ್ನ ಮಗನಿಗೊಂದು, ಅಕ್ಕಪಕ್ಕದವರಿಗೊಂದೊಂದು
ಈ–ಮೇಲ್ ಐಡಿ ಪಡೆದುಕೊಂಡೆವು;
E-mail: alemarimvs@gmail.com
ಇಲ್ಲಿಗೆ ಈ–ಮೇಲ್ ಕಳುಹಿಸುವವರು
ಕೋಮಲ ಬೆರಳು, ಕೋಗಿಲೆ ಕಂಠ, ಗೌರವ ಬಣ್ಣ
ಹೊಂದಿರುವ ಫಿ–ಮೇಲ್ ಆಗಿದ್ದರೆ ಚೆನ್ನ
(ಸುಶೀಲಳಿಗೆ ಗೊತ್ತಿಲ್ಲದ ಹಾಗೆ ಜಾಗೃತಿ ಇರಲಿ),
ಮೊದಲ ದಿನವೇ ಮಾಯಾಜಾಲದಲ್ಲಿ
ತೂರಿಕೊಂಡ ನನ್ನನ್ನು, ಕ್ರಾಂತಿಯನ್ನು
ಬಿಲದಿಂದ ಉಡವನ್ನು, ನೀರಿನಿಂದ ಮೊಸಳೆಯನ್ನು
ಎಳೆದು ತರುವಂತೆ ಹೊರತಂದಿದ್ದಳು ಸುಶೀಲ–
ಅನಂತರ ಅವಳದೂ ಅದೇ ಗತಿ
'ಗೂಗಲ್ ಇಂಡಿಯಾ' ಒತ್ತಿದರೆ–
ವಿಮಾನ ನಿಲ್ದಾಣ, ಉಕ್ಕು ಹಕ್ಕಿಗಳು,
ಐಟಿ/ಬಿಟಿ ಕಾರ್ಖಾನೆಗಳು, ಬೆಂಗಳೂರಿನ
ಉಬ್ಬುತಗ್ಗು ರಸ್ತೆಗಳು, ನಮ್ಮ ಮನೆ ಬೀದಿ,
ಎದುರು ಮನೆ ಮೇಲಿನ ಸೋಲಾರ್ ಹೀಟರು
ಎಲ್ಲವೂ ಕಾಣಿಸುತ್ತದೆ, ನೂರಾರು ಚಾನಲ್‌ಗಳಲ್ಲಿ
ಕಲೆ–ಸಾಹಿತ್ಯ, ಚರಿತ್ರೆ ವಿಜ್ಞಾನ, ವಿಶ್ವ ಕಥಾಕೋಶ–
ರೇಡಿಯೊ ಟಿವಿ ಮೊಬೈಲ್ ಹ್ಯಾಮ್ ಪ್ರಪಂಚ
ಫೋನ್ ಮತ್ತು ಸೈಟುಗಳು ಎಲ್ಲವೂ ತೆರೆದುಕೊಳ್ಳುತ್ತದೆ.

ಈ ಮಾಯಾಬಜಾರಿನಲ್ಲಿ;-
ಜೂಜುಕಟ್ಟೆ, ಕಳ್ಳರ ಮಾರುಕಟ್ಟೆ; ಕ್ರಿಕೆಟ್,
ಡಬ್ಲೂ ಡಬ್ಲೂ ಎಫ್, ಪರದೆ ಇಲ್ಲದ ಸಿನಿಮಾ;-
ಎಲ್ಲಕ್ಕೂ ಕಣ್ಣು ಕಾಲು ನರನಾಡಿ ಮಾಂಸ
ಪರ್ವತ ಗುಹೆಗಳ ಒಳಗೆ ತೂರಿಕೊಳ್ಳುವ ತವಕ;
ಆಗಲೇ ಈ ಬಾವಿಗೆ ಇಳಿದವರನ್ನು,
ಆಳಕ್ಕೆ ಪಾತಾಳ ಜಗತ್ತಿಗೆ ತರಾವರಿ
ಹೊರಟಿರುವವರನ್ನು ಕರಕರ ಕಡಿಯುವುದು
ವೈರಸ್ಸು; ಆಗ ಸಾಫ್ಟ್‌ವೇರ್ ಎಂಜಿನಿಯರ ಕರೆದು
ಹತ್ತಿಸಬೇಕು ಇದಕ್ಕೆ ಆ್ಯಂಟಿವೈರಸ್-
ಸಿಲಿಕಾ ಚಿಪ್ ಸರಿ ಇದೆಯಾ ನೋಡಬೇಕು;
ಈ ವೈರಸ್‌ಗಳಿಗೆ ಎಲ್ಲೋ ಕೈಗಳು, ಇನ್ನೆಲ್ಲೋ
ಕಾಲುಗಳು ಮೂಡಿ, ಫೈಲುಗಳನ್ನು ಕರಕರ
ಕಚ್ಚಿ, ಡೂಪ್ಲಿಕೇಟ್ ಮಾಡಿ ದಿಕ್ಕುತಪ್ಪಿಸುತ್ತವೆ;
ಇಲ್ಲವೆಂದರೆ ಕಂಪ್ಯೂಟರ್ ಕತ್ತು ಹಿಚುಕಿ
ಸಾಯಿಸೇಬಿಡುತ್ತವೆ.

ಇಂಟರ್‌ನೆಟ್ ಅಂದರೆ ಹಾಗೆಯೇ
ಎಲ್ಲೋ ತಲೆ, ಎಲ್ಲೋ ಬಾಲ, ಇನ್ನೆಲ್ಲೋ ಬುದ್ಧಿ.



ಇಂಟರ್‌ನೆಟ್ ಯುವಕರಿಗೆ ಒಂದು ವರ,
ಹಾಗೆಯೇ ಶಾಪ ಕೂಡ.
– ಬಾಬ್ ಡೋಲ್

# ಬೆನ್ನೇರಿ ಹೋದವರು

ಎಲ್ಲೋ...
ಸಮುದ್ರ ನಟ್ಟ ನಡುವೆ
ಎದ್ದು ನಿಂತ ಬಿರುಗಾಳಿ ಬೋರಿಟ್ಟು–
ಆಕಾಶ ಹರಿದು ದೋ... ಬೀಳುವ ಮಳೆಗೆ
ತರತರನೆ ನಡುಗಿತು ಕಂಗಾಲ ಕರುಳು;
ಕುಸಿದು ಬಿದ್ದವು–
ಮಣ್ಣುಗೋಡೆ ಸೋಗೆ ಗುಡಿಸಿಲು,
ಕೆರೆ ಕುಂಟೆ ನೆಲವೆಲ್ಲಾ ಜಲಾವೃತ;
ಬೋರ್ಗರೆವ ನದಿ, ನಾಗರಗಳು–
ಪ್ರಾಣಿ ಪಕ್ಷಿ ಜೀವ ಸಂಕುಲವೇ
ತೇಲಿ ಹೋಯಿತು ಉಸಿರುಗಟ್ಟಿ,
ಆವರಿಸಿತು ಕತ್ತಲು ಧಾತ್ರಿಯ ಸುತ್ತಲು,
ಅಳಿದುಳಿದ ಜೀವಿಗಳು ಆಕಾಶದ ಕೆಳಗೆ,
ಮಳೆ ಗಾಳಿ ಬಿಸಿಲು ಜೊತೆಗೆ;
ಕಣ್ಣು ಪಾಪು ದೀಪಗಳ ಹೊತ್ತು ಕಾಯುವರು
ಬೆನ್ನೇರಿ ಹೋದವರು ಹಿಂದಕ್ಕೆ ಬರುವರೆಂದು.
ಬೆವುತು ನಿಂತ ಬಿರುಗಾಳಿ, ಅಲ್ಲೋಲ ಕಲ್ಲೋಲ
ಸಮುದ್ರ, ಅದುರಿ ಹೋಗಿವೆ ಬೆಟ್ಟಗುಡ್ಡಗಳೆ

ಶತಮಾನದ ಸೂಪರ್ ಸೈಕ್ಲೋನಿಗೆ-
ಒರಿಸ್ಸಾ ಜಾರಿ ಕುಳಿತಿದೆ ಸಮುದ್ರ ಮಟ್ಟಕ್ಕೆ,
ಬೆಳಕು ಬರುವುದು ಯಾವಾಗಲೋ ವಸುಂಧರೆಗೆ;
ಉಳಿದಿದ್ದು ಹಾಳೂರು, ಪಾಳುಗುಡಿ, ಉಪ್ಪು ನೆಲ;
ಉಳ್ಳವರ ಹಿಡಿ ಅನುಕಂಪ.



ಒರಿಸ್ಸಾದಲ್ಲಿ ಸಂಭವಿಸಿದ 1991ರ ಶತಮಾನದ
ಚಂಡಮಾರುತ ಕುರಿತು ಬರೆದ ಪದ್ಯ

## ಹರೇ ಕೃಷ್ಣಗಿರಿ

ಮೂವತ್ತು ಮೂರು ಕೋಟಿ
ರೂಪಾಯಿಗಳು ಖರ್ಚಾಗಿದೆಯಂತೆ
ಈ ಹರೆ ಕೃಷ್ಣ ಗಿರಿ (ಇಸ್ಕಾನ್) ಕಟ್ಟಲಿಕ್ಕೆ;
ಗೌಡ, ಕೆಂಪೇಗೌಡನ ಊರಿನಲ್ಲಿ-
ಯಮುನಾ ತೀರವೆ? ಕಲಿಯುಗದಲ್ಲಿ
ಕೃಷ್ಣ ಗೋಪಿಕೆಯರ ವೈಭವವೇ?
ನೋಡಲು ಹೊರಟೆ-
ಕೈಹಿಡಿದವಳ ಜೊತೆ ಸ್ಕೂಟರ್ ಏರಿ;
ಗ್ರಾನೈಯ್ಟ್ ಗುಡ್ಡದ ಮೇಲೆ ಕಂಭ,
ಹತ್ತಾರು ಸ್ತಂಭ, ಗುಡಿ ಗೋಪುರ
ಬಂಗಾರ ಕವಚಗಳು.
ಹತ್ತಿಹೋದಂತೆ ಒಂದೊಂದೆ ಮೆಟ್ಟಿಲು
ನೆಲಕ್ಕೆ ನೆಲವೇ ನುಣುಪಾಗಿ-
ಗೋಡೆ, ಚಾವಣಿ, ಬೃಂದಾವನವೆ
ಗೆಜ್ಜೆ ಕಟ್ಟಿ ಕುಣಿದಾಡುತಿದೆ;
ರಾಧೆ ಕೃಷ್ಣರ ನೃತ್ಯದಿಂದ.
ಜಗದಲ್ಲಿ ಒಬ್ಬನೇ ರಾಮ,
ನನಗೂ ಒಬ್ಬಳೇ ಪತ್ನಿ. ಆ ಕೃಷ್ಣನಿಗೋ
ಹದಿನಾರು ಸಾವಿರ ಪ್ರೇಯಸಿಯರು,
ನುಡಿಸಿದರೆ ಕೊಳಲು ಓಡಿ ಬರುವಳು ರಾಧೆ;
ಕಾಣಿಸಿಲಿಲ್ಲ ಎಲ್ಲೂ ರುಕ್ಮಿಣಿಯರು.

ಹರೇ ಕೃಷ್ಣ ಗಿರಿಯ ಮೇಲೆ
ಭಕ್ತರ ಇರುವೆ ಸಾಲು ಸಾಲು–
ನಡುವೆ ದ್ವಾಪರ ಯುಗದ ಮೂರ್ತಿಗಳು;
ಮಾರ್ಕೆಟ್ ತುಂಬಾ ಪ್ರಾರ್ಥನೆ, ತೀರ್ಥ, ಪ್ರಸಾಧ
ಒಂದೇ ಶಿಸ್ತು, ಎಲ್ಲವೂ ಅಚ್ಚುಕಟ್ಟು;
ಭಕ್ತಿಯ ನಶೆ ಏರಿ, ಮಂಡಿಯೂರಿ–
ಕೈಮುಗಿದು ಬೇಡಿದೆ ದೀನನಾಗಿ–
"…. ದೇವನೆ ಕೊಡಪ್ಪ ನಿನ್ನೆ ಬುದ್ಧಿಯನ್ನೇ…"
ಯಾರೋ ಕಿವಿ ಹಿಂಡಿ ಜೋರಾಗಿ,
ನೋಡಿದೆ ಹಿಂದಕ್ಕೆ, ತಾಳಲಾರದೆ ನೋವು;
ನನ್ನ ಕೈಹಿಡಿದ ಅವಳದೆ ಕೆಲಸ.



## ಟಿಪ್ಪು ಸುಲ್ತಾನ್

ಹೈದರನ ಮಗ ಟಿಪ್ಪೂ
ಕರ್ನಾಟಕದ ಕಲಿ, ಮೈಸೂರಿನ ಹುಲಿ;
ಹುಟ್ಟಿದ ಕಾವೇರಿ ದಡದಲ್ಲಿ
ಇನ್ನೂರ ಹದಿಮೂರು ವರುಷಗಳ ಹಿಂದೆ-

ತೇಗಿನ ಮರದ ನೆಡು ತೋಪು, ಮಲ್‌ಬರಿ,
ರೇಷ್ಮೇ ಪದ್ಧತಿ ಮೊದಲಿಗೆ ಅಳವಡಿಸಿದ ಟಿಪ್ಪು;
ಇಂಗ್ಲೆಂಡಿನ ಓಕ್, ಕೇಫ್ ಆಫ್ ಗುಡ್‌ಹೋಫ್‌ನ ಪೈನ್;
ಮೆಕ್ಸಿಕೊದ ಹಣ್ಣು ಗಿಡಗಳ ತಂದು-
ಸಿದ್ದಾಪುರದಲ್ಲಿ ತೋಟ ಮಾಡಿ
ಆಧುನಿಕ ಕೃಷಿಗೆ ನಾಂದಿ ಆಡಿದ
ಈ ಮೂಲೆಯ ಅಪ್ಪಟ ರೈತ;
ಚಿನ್ನ, ಶ್ರೀಗಂಧ, ಆನೆ ರಾಜ್ಯದ ಸಂಪತ್ತೆಂದು
ಘೋಷಿಸಿದ ಸ್ವಾವಲಂಬಿ, ಸ್ವಾಭಿಮಾನಿ-

ಫ್ರಾನ್ಸ್‌ನಿಂದ ವೈದ್ಯ, ಬಡಿಗ, ನೇಕಾರ,
ಅಕ್ಕಸಾಲಿಗ, ಕಬ್ಬಿಣ ಕುಲುಮೆಯ ತರಿಸಿ,
ಥರ್ಮಾಮೀಟರು, ಕೈಗಡಿಯಾರ, ಕತ್ತರಿ, ಕಾರ್ಖಾನೆಗಳ
ಸ್ಥಾಪಿಸಿದ ಆಧುನಿಕ ಕರ್ನಾಟಕದ ಪಿತಾಮಹ.
ಚನ್ನಪಟ್ಟಣಕೆ ಗೊಂಬೆಗಳ ತಂದು,
ಕೋಲಾರದಲ್ಲಿ ಚಿನ್ನ ಶೋಧಿಸಿ; ರಾಕೇಟ್

ಬಳಕೆಯ ಸಾಧ್ಯ ಸಾಧ್ಯತೆಗಳ ಪರೀಕ್ಷಿಸಿ,
ಬಿಳಿಯರ ವಿರುದ್ಧ ಪ್ರಯೋಗಿಸಿದ ಟಿಪ್ಪು-
ಸಮೃದ್ಧ ಕನ್ನಡ ನಾಡಿಗೆ ನಾಂದಿ ಹಾಡಿ
ಸ್ವಾತಂತ್ರ್ಯ ಭಾರತದ ಕನಸುಕಂಡ ವೀರಯೋಧ-

ಬ್ರಿಟಿಷರ ಎದುರಿಗೆ ಸಾಮಾನ್ಯ ಸಿಪಾಯಿ ಹಾಗೆ
ಹೋರಾಡಿ ಅಸುನೀಗಿದ ಟಿಪ್ಪು-
ಸತ್ತ ಮೂರು ದಿನ ಶ್ರೀರಂಗ ಪಟ್ಟಣದಲ್ಲಿ
ಮುಂಗಾರು ಧಾರಾಕಾರವಾಗಿ ಅಶ್ರುತರ್ಪಣ
ಸುರಿಸಿತಂತೆ, ಬ್ರಿಟಿಷರೆ ಹೇಳಿದಂತೆ-
ಅಂದು ದೈವವೇ ಶೋಕಿಸಿತಂತೆ.



# ಎಲ್ಲಿಂದ ಬರುವರು

ಯಾವ
ದಿಕ್ಕಿನಿಂದಾದರೂ ಯಾವ
ಮಾಯೇಯಲ್ಲಾದರೂ ಬರುವರು,
ಕತ್ತಲಲ್ಲಿ, ಬೆಳಕಲ್ಲೂ ಬರುವರು;
ಬಂದ ಬಂದವರು ಜಗದ ಮುಂದೆ ನಿಲ್ಲುವರು,
ಮತ್ತೆ ಸಿದ್ಧರಾಗಿ ನಡೆವರು ಸಾಲಾಗಿ;–
ಹೋದವರು ಹಿಂದಿರುಗಲಾರದೆ
ಹೋಗುವರು ಎಲ್ಲಿಗೋ?
ಎಂದೂ ಬಾರದ ಅತಿಥಿಗಳೆ ಬರುವರು
ಈ ಜಗತ್ತಿಗೆ;–
ಇವರೆಲ್ಲ ಎಲ್ಲಿರುತ್ತಾರೆ?
ಮಣ್ಣು, ಗಾಳಿ, ಮಳೆ, ಸೂರ್ಯ, ನಕ್ಷತ್ರಗಳಲ್ಲೇ?
ಇಲ್ಲ! ನಮ್ಮ ನಿಮ್ಮಲ್ಲೇ?
ಯಾರು ಎಲ್ಲಿಂದ ಬರುವರು?
ಬಂದವರು ಏನು ಮಾಡುವರು ಇಲ್ಲಿ?
ಇಷ್ಟಕ್ಕೂ ಇವರೆಲ್ಲಾ ಎಲ್ಲಿಂದ ಬರುವರು?
ಎಲ್ಲಿಗೆ ಹೋಗುವರು ಆಕಾಶ ಕಾಯಗಳಂತೆ;
ಯಾವ ಲೋಕಕ್ಕೆ ಹೋಗುವರು? ಅಲ್ಲಿ ಇವರನ್ನು
ಯಾರು ಬರ ಮಾಡಿಕೊಳ್ಳುವರು?



# ಒಂಟೆ ಸಾಲು ಸಾಲು

ಮರು–
ಭೂಮಿಯಲ್ಲಿ ಮರಳು,
ಲಕ್ಷಾಂತರ ವರುಷಗಳ ಉರುಳು;
ಜೀವ ಕಳಚಿದ ಬದುಕು ನೋಡಲು,
ಕಣ ಕಣಕ್ಕೂ ಸಾವಿರ ವರುಷಗಳ ದಾಹ.

ಎದೆಯ ಮೇಲೆ ನಡೆವ
ಹಾವು, ಚೇಳು, ಓತಿಕ್ಯಾತ, ಎಲ್ಲಕ್ಕೂ
ಉದ್ದನೆ ಕಾಲು, ಒಂಟೆ ಸಾಲು ಸಾಲು;
ದಿನವಿಡೀ ಸುಡು ಬಿಸಿಲಿನ ಪಹರೆ;
ನಡೆದಷ್ಟು ಉದ್ದನೆ ಸಾಗುವ ದಾರಿ–
ಬದುಕು ಮುಗಿಯದ ಯುದ್ಧಕಾಂಡ;
ಎಲ್ಲಕ್ಕೂ ಇಲ್ಲಿ ಚಿನ್ನದ ಬಣ್ಣ.

ಎದ್ದಾಗ ಬಿರುಗಾಳಿ ಹೃದಯ ಸ್ತಬ್ಧ;
ಬೀಸುವ ಕಡೆಗೆ ಹಾರುವ ತವಕ,
ದಿಬ್ಬದ ಮೇಲೆ ಹಾರುವ ದಿಬ್ಬ;
ಪ್ರತಿನಿತ್ಯ ಪ್ರಕೃತಿ ನೇಯುವ ಕಲೆ.

ಕೆಂಪಾಗಿ ಕಾದ ಸೂರ್ಯ–
ಮೇಲೆ ವಿಶಾಲ ನೀಲ; ದಾಹಕೆ ಒಳ ಸರಿದು
ಕೈಕಟ್ಟಿ ಮೌನವಾಗಿ ಕುಳಿತ ಕುಳಿಗಳು,
ಒಣಗಿದ ಕತ್ತಾಳೆ ತುಟಿಗಳು,

ಮರುಭೂಮಿ ಊದಿದ ಬಿಸಿಲಣ್ಣು;
ಒಡಲಾಳದಲ್ಲಿ ಎಲ್ಲೋ ಸಳಸಳ ನೀರುಬ್ಬಗ್ಗೆ
ನರನಾಡಿಯಲ್ಲಿ ಪುಟಿವ ಜೀವಸೆಲೆ,
ಪ್ರಕೃತಿಯೇ ಹಚ್ಚಬೇಕಿದೆ ಇದಕ್ಕೆ ಚಿಕಿತ್ಸೆ.

ಅಲ್ಲಾ ಮೇಲೆ ನಂಬಿಕೆ ಇರಲಿ, ಆದರೆ ಒಂಟೆಯನ್ನು
ಹಗ್ಗದಿಂದ ಕಟ್ಟದೆ ಬಿಡಬೇಡಿ.

# ಕಪಿ

ಕಪಿ...
ಕೋತಿ... ವಾನರ...
ಎಂದರೆ ಯಾರೋ ಕರೆದಂತಾಗುತ್ತದೆ
ನನಗೆ; ಸೊಟ್ಟು ಮುಖ, ಲೋಲೊಟ್ಟೆ ಕೆನ್ನೆ
ದುರುಗುಟ್ಟುವ ಕಣ್ಣು;
ಇದೋ ಹಳೆ ಜಗತ್ತಿನ ಕೋತಿ,
ಧರಿಸಿದೆ ಹೊಸ ಜಗತ್ತಿನ ಮೂತಿ;
ಜೇಡ ಕೋತಿ, ಗೂಬೆ ಕೋತಿ, ಹೌಲರ್ ಕೋತಿ
ಇನ್ನೂ ನಮ್ಮ ದೇಶದ ಪ್ರಭೇದವೇ ಆದ
ರ್‍ಹೀಸಸ್ ಕೋತಿ; ಎಲ್ಲಕ್ಕೂ ಮೂಲ
ತಿಮಿಂಗಿಲಂತೆ ಏನಾಶ್ಚರ್ಯ...?
ಬೈಗೂ ಬೆಳಗೂ ಒಳಗೂ ಹೊರಗು
ಅವುಗಳ ಶಬ್ದ, ಸಂಖ್ಯಾಸಂಪತ್ತು;
ಬಾಲವೇ ಬುನಾದಿ – ಹಾರಿದರೆ ಹಲವು
ನೇತಾಡುತ್ತವೆ ಮಕ್ಕಳ ಕ್ರೆಯಾನ್ ಕಣ್ಣುಗಳಲ್ಲಿ.
ಮ್ಯಾಂಡ್ರಿಲ್ ಕೋತಿಗಳು,
ತೆಂಗಿನ ಕಾಯಿ ಕಿತ್ತುಕೊಡುವ
ಮಲಯಾ ಕೋತಿ (ಕಿಂಕರ);
ಬಿಸಿ ನೀರಿನ ಬುಗ್ಗೆಗಳಲ್ಲಿ
ಸ್ನಾನ ಮಾಡುವ ಜಪಾನ್ ಕೋತಿ,
ಗೆಡ್ಡೆ ಗೆಣಸು ಸಮುದ್ರ ಉಪ್ಪಿನಲ್ಲಿ
ಅದ್ದಿ ತಿನ್ನುವ ಮೆಕಾಕ್ ಕೋತಿ;
ಇನ್ನೂ ಒಂದೆಜ್ಜೆ ಮುಂದೆ ಹೋಗಿ

ಕುಂಚದಿಂದ ಆಧುನಿಕ ಚಿತ್ರಕಲೆಯನ್ನೇ
ಬಿಡಿಸುವ ಕಪೋಚಿನ್ ಕೋತಿ.

ನಮ್ಮೂರಿನ ಕೋತಿಗಳೋ-
ಬೇಡುತ್ತವೆ ಆಹಾರ ಜನಜಂಗುಳಿಯಲ್ಲಿ
ಇಲ್ಲ! ಕದಿಯುತ್ತವೆ ಅವರಿವರ
ಕೈಯಿ ಬಾಯಿಗಳಿಂದಲೆ-
ಇಷ್ಟಕ್ಕೂ ಅವು ನಮ್ಮನ್ನೇ ಹೋಲುವ
ನಮ್ಮ ಪೂರ್ವಜರಲ್ಲವೇ?
...ಬರುತ್ತೇನೆ ಇಲ್ಲೇ ಇರಿ
ಯಾರೋ ಕರೆದಂತಿದೆ...?

ಬೆಕ್ಕುಗಳು ಮತ್ತು ಕೋತಿಗಳು, ಕೋತಿಗಳು ಮತ್ತು ಬೆಕ್ಕುಗಳು,
ಎಲ್ಲಾ ಮನುಷ್ಯರ ಬದುಕು ಅವುಗಳಲ್ಲಿದೆ.
- ಹೆನ್ರಿ ಜೇಮ್ಸ್

# ಲಂಕಾದಹನ

ಶ್ರೀಲಂಕಾ–
ನೀಲಿ ಸಾಗರದಲ್ಲಿ ಅಪೂರ್ವ ಅನರ್ಘ್ಯ ರತ್ನ,
ಬಿಳಿ ಮರಳಿನ ಕಡಲ ದಂಡೆ– ತೆಪ್ಪೆಗಳ ತೇರು,
ಹವಳದ ದಿಬ್ಬ, ತೆಂಗು, ತಾಳೆಗಳ
ಹಸಿರು ಮಾಲೆ, ಶೃಂಗರಿಸಿದ ಕಡಲ ಕಿನಾರೆ;
ಹಿಂದೂ ಮಹಾಸಾಗರದಲ್ಲಿ ತೇಲುತ್ತಿರುವ
ಪ್ರಕೃತಿಯ ಸೊಬಗು ಶ್ರೀಲಂಕಾ–
ಸಾಗರ ಮಧ್ಯೆ ಹೊತ್ತಿ ಉರಿಯುತ್ತಿರುವ
ಜ್ವಾಲಾಮುಖಿ, ಉಗ್ರಗಾಮಿ, ಸೈನಿಕ–ಪೊಲೀಸರ
ಕದನ, ನಡುವೆ ಅಮಾಯಕರ ಜೀವಹರಣ;
ಸಿಡಿಯುವ ಮಾನವ ಬಾಂಬುಗಳು,
ನಿತ್ಯ ಕುದಿಯುವ ಕುಲುಮೆ, ನಿಸ್ತೇಜಗೊಂಡ
ಪುಟ್ಟ ದ್ವೀಪ ಶ್ರೀಲಂಕಾ–
ಅಹಿಂಸೆ, ಶಾಂತಿ ಸಂದೇಶ ಜಗತ್ತಿಗೆ ಸಾರಿದ
ಬೌದ್ಧ ದೇಶ ತಲುಪಿದೆ ಅಶಾಂತಿಯ ಪರಾಕಾಷ್ಠೆ;
ಇದರ ಭೌಗೋಳಿಕ ಸ್ವರೂಪವೆ
ಪ್ರಪಂಚದ ನೋವ ಮಹಾಸಾಗರ ಕೆನ್ನೆಯ
ಮೇಲೆ ಕಣ್ಣೀರ ಹನಿಯಾಗಿ
ಜಾರುತ್ತಿರುವ ಕಡಲ ಮುತ್ತು;
ಲಂಕಾದಹನ ಈ ಹೊತ್ತು.



# ಭೂಲೋಕದಲ್ಲಿ ಭಾರತವೆ ಯಮಲೋಕ

ಅಕ್ಷರ ನೀಡದೆ
ಅನ್ನ, ಆಶ್ರಯ ಕೊಡದೆ,
ಜನಸಂಖ್ಯೆ ಹತೋಟಿಯಲ್ಲಿಡದೆ,
ಹುಟ್ಟುವ ಮಗುವಿಗೂ ಹೊಟ್ಟೆ ಹೊರೆಯೊ ಶಿಕ್ಷೆ.

ಗಾಂಧಿ ಕನಸು–
ಹಳ್ಳಿಹಳ್ಳಿಗೂ ಅಮಲೇರಿಸಿ,
ಸ್ಲಂಗಳ ಮೇಲೆ ಸರಕಾರ ನಡೆಸುವ
ಖಾದಿ, ಖಾಕಿ, ಕಾವಿಗಳ ಚಕ್ರಾದಿಪತ್ಯ;
ಎದೆಯ ಮೇಲೆ–
ಸುನಾಮಿ, ಚಂಡಮಾರುತಗಳ ಬೀಸಿ–
ಪತ್ರಿಕೆಗಳ ತುಂಬಾ
ಯೋಜನೆಗಳ ಮಾಡಿ, ರಸ್ತೆಗಳ ತಲೆ ಕಡಿದು
ಉಳ್ಳವರ ಸೆನ್ಸ್‌ಸ್ ತೆಗೆದು
'ದೇಶ ಅಭಿವೃದ್ಧಿ ಪಥದಲ್ಲಿದೆ'
ಒಂದೇ ಭಜನೆ ಮಾಡುವರು.

ಮಹಾಭಾರತದೊಳು ಗೀತೆಯೆಂಬ
ಚಾತುರ್‌ವರ್ಣಗಳ ಸುಲಿದಿಟ್ಟು,
ನ್ಯಾಯಾಲಯಗಳ ಜೈಲುಗಳಾಗಿಸಿ,
ಆಸ್ಪತ್ರೆಗಳ ನರಕಗಳಾಗಿಸಿ
ಕನ್ನಡ ಓದಿದರೆ ಕೆಲಸ ಕೊಟ್ಟಾರೆಯೇ ಇವರು?

ಗಂಗಾ, ಯಮುನಾ, ಕಾವೇರಿಗಳನ್ನೇ
ಮೂಢನಂಬಿಕೆಗಳಲ್ಲಿ ಮುಳುಗಿಸಿ
ದೇವಾನುದೇವತೆಗಳ ಪಕ್ಕಕ್ಕೆ ತಳ್ಳಿ
ತಾವೇ ಆಯುಧ ಪೂಜೆ, ಪಾದ ಪೂಜೆ
ಮಾಡಿಸಿಕೊಂಡು–
ಮೆರೆವರು ಜಗತ್‌ಗುರುಗಳು
ವಾಸ್ತುಶಾಸ್ತ್ರ, ಹಸ್ತಶಾಸ್ತ್ರ ಕುಂಡಲಿ ಮಂಡಲಿ
ನಕ್ಷತ್ರಗಳಿಗೆ ಕಲ್ಲು ತೂರಿ
ಮಾವಿನ ಕಾಯಿಗಳ ಉದುರಿಸುವರು.

ಭೂಮಿಯ ಮೇಲೆ
ಭುವನ ಸುಂದರಿಯರ ಸೃಷ್ಟಿಸಿ,
ಮಧುಮೇಹ, ರಕ್ತದೊತ್ತಡ, ಹೃದ್ರೋಗ, ಎಚ್‌ಐವಿ,
ಏಯ್ಡ್ಸ್ ಪ್ರಪಂಚಕ್ಕಾಗುವಷ್ಟು–
ಕುಂಟು ಕುರುಡು ಬಿಕ್ಷುಕರ ಹುಟ್ಟಿಸಿದವರು;
ನೆಲದ ಕತ್ತು ಹಿಸಿಕಿ, ಹೆಣ್ಣು ಭ್ರೂಣಗಳ ಹೊಸಕಿ,
ಭೂಲೋಕದಲ್ಲಿ ಭಾರತವೆಂಬ ಯಮಲೋಕ
ಸೃಷ್ಟಿಸಿದವರು.



ಬುದ್ಧ : ಜಗತ್ತಿನ ಜನ ಎಲ್ಲ ಸೇರಿ ಪ್ರಾರ್ಥನೆ
ಮಾಡಿದರು ನೀರನ್ನು ಕೆಳಗಿನಿಂದ ಮೇಲಕ್ಕೆ
ಹರಿಯುವಂತೆ ಮಾಡಲಾರರು.

# 'ಬೆಟ್ಟಗುಡ್ಡಗಳ ಬೋಗುಣಿಯಲ್ಲಿ'
## ಕವನ ಸಂಕಲನಕ್ಕೆ ಬಂದ ಪ್ರತಿಕ್ರಿಯೆಗಳು

**ಕಡೆಗಣಿಸುವಂತಿಲ್ಲ**

ವೆಂಕಟಸ್ವಾಮಿ ಅವರು ಕವನ ಕಟ್ಟಲು ಪ್ರೀತಿ, ವಿನಯಕ್ಕಿಂತ ಸಿಟ್ಟನ್ನು ಜಾಸ್ತಿಯಾಗಿ ಬಳಸಿಕೊಂಡಂತಿದೆ. ಇದು ಈ ಕವನ ಸಂಕಲನದ ಜೀವಳವೂ ಹೌದು. ಸಿಟ್ಟಿನ ಭರದಲ್ಲಿ ತಾವು ಕವಿ ಎಂಬುದನ್ನು ಮರೆಯುವುದಿಲ್ಲ ಕವಿ. ಚಲಾವಣೆಯಲ್ಲಿರುವ ಎಷ್ಟೋ ಕವಿಗಳಿಗಿಂತ ಭಿನ್ನವಾಗಿ ಕವನ ಹೊಸೆಯುವ ವೆಂಕಟಸ್ವಾಮಿ, ಕೆಲವು ಸಲ ತಮ್ಮ ಕವನಗಳನ್ನು ಘೋಷಣೆಗಳ ಮಟ್ಟಕ್ಕೆ ಇಳಿಸಿಬಿಡುತ್ತಾರೆ. ಆದರೂ ಒಂದು ಮಾತನ್ನು ಒಪ್ಪಲೇಬೇಕು. ಇವರ ಕವನಗಳನ್ನು ಕಡೆಗಣಿಸುವುದು ಅಸಾಧ್ಯ.

**– ಕನ್ನಡಪ್ರಭ 11.5.1997**

**ಬೆನ್ನುಡಿಯಿಂದ**

ಯಾವತ್ತೂ... ತುಟಿ ಮೀರದ ಮಾತು; ತುಟಿ ಕಚ್ಚಿ ಬದುಕುವ ಛಲ... ಅದರಾಚೆಗೂ ಹುಗಿದು ಹೋಗಿರುವುದೇನನ್ನೋ ಹುಡುಕುವ ತುಡಿತ... ಇದು ಈ ವೆಂಕಟಸ್ವಾಮಿ.

ಆದರೇಕೋ ಈ ವೆಂಕಟಸ್ವಾಮಿ ಇತ್ತ ದಸಂಸದ ತೆಕ್ಕೆಗೂ ದಕ್ಕದೆ, ಅತ್ತ ಬಂಡಾಯದ ಬಿರುಗಾಳಿಯ ಚೀರಾಟದಲ್ಲೂ ಕರಗಿ ಹೋಗದೆ ಆಮೆಯಂತೆ ಕತ್ತನ್ನು ಒಳಗೆಳೆದುಕೊಂಡು ತನ್ನೊಳಗೆ ನೋಡಿಕೊಳ್ಳುತ್ತಾ... ಅಗತ್ಯ ಬಿದ್ದಾಗ ಹೊರ ಹಾಕಿ... ಬೆಚ್ಚಿ ಬೆರಗಾಗಿ ಮತ್ತೆ ಒಳಗೆಳೆದುಕೊಳ್ಳುತ್ತಾ... ಹೀಗೆ ಬರೆದರು.

ಅವರು ಬರೆದ ಎಲ್ಲವನ್ನೂ ಗಮನಿಸಿದಾಗ ಥಟ್ಟನೆ ಸೆಳೆಯುವುದು ಪದ್ಯ ಕಟ್ಟುವಲ್ಲಿನ ಅವರ ಪ್ರಮಾಣಿಕತೆ ಪರಿಶ್ರಮ, ಬೆರಗು ತರುವ ಮುಗ್ಧ ಪ್ರತಿಮಾಲೋಕ, ಸಮಕಾಲೀನ ಕ್ಲೀಷೆ, ಗೊಂದಲಗಳನ್ನು ಮೀರಿದ ವಸ್ತು... ವಿನ್ಯಾಸ, ಹೊರ ಒತ್ತಡಗಳನ್ನು ಕೇರು ಮಾಡದೆ ತನಗನಿಸಿದ್ದನ್ನು ಕವಿತೆ ಮಾಡುವ ಕಳಕಳಿ... ಇವು ಕಾವ್ಯದಲ್ಲಿ ತನ್ನ ತನ ಕಂಡುಕೊಳ್ಳಬಯಸುವ ಕವಿಯೊಬ್ಬನ ಜರೂರಿಗಳು. ಈ ಕಾರಣಕ್ಕಾಗಿಯೇ ವೆಂಕಟಸ್ವಾಮಿ ಮುಂದೊಂದು ದಿನ ನೆನಪಿಟ್ಟುಕೊಳ್ಳುವಂಥ ಕವಿಯಾಗುವ ಸಾಮರ್ಥ್ಯ,

ಸಾಧ್ಯತೆಯುಳ್ಳವರು. ಇವೊತ್ತಿನ ಬಹುಪಾಲು ಚಲಾವಣೆಯಲ್ಲಿರುವ ಕವಿಗಳ ಕಾವ್ಯಕ್ಕಿಂತ ಇವರದು ಬೇರೆಯೇ ಆಗಿ ನಿಲ್ಲುವಂಥ ಕಾವ್ಯ ಎಂದು ಧಾರಳವಾಗಿ ಹೇಳಬಹುದು.

–ಕೆ. ರಾಮಯ್ಯ

**ಲಂಕೇಶ್ ಪತ್ರಿಕೆ**

ವಿಜ್ಞಾನದ ವಿದ್ಯಾರ್ಥಿ ಎಂ.ವೆಂಕಟಸ್ವಾಮಿ ಹೊರತಂದ 'ಬೆಟ್ಟಗುಡ್ಡಗಳ ಭೋಗುಣಿಯಲ್ಲಿ' ಕವನ ಸಂಕಲನದ ಶುರುವಿಗೆ ಕಪ್ಪು ಮನುಷ್ಯರ ಬಗ್ಗೆ, ನೀಗ್ರೋಗಳ ಬಗ್ಗೆ, ಕಪ್ಪು ಹುಡುಗಿಯ ಬಗ್ಗೆ ಬರೆದ ಕವನಗಳನ್ನು ಕಂಡ ತಕ್ಷಣ ಯಾವ ಕಾವ್ಯದ್ರವದ ಹ್ಯಾಂಗೋವರ್ ಈ ಕವಿಯನ್ನು ಹೀಗೆ ಬರೆಸುತ್ತಿದೆ ಎಂಬುದು ಹೊಳೆದುಬಿಡುತ್ತದೆ. ಹಾಗಿದ್ದೂ 'ಬೆಟ್ಟಗುಡ್ಡಗಳ ಬೋಗುಣಿಯಲ್ಲಿ' ಎಂಬ ಕವಿತೆಯ ಕೊನೆಯಲ್ಲಿ ತಮ್ಮ ಪೂರ್ವಜರು

**ನೀರುಗಾಳಿ ಜೀವಸೆಲೆ ಕಿರಣಗಳಲ್ಲಿ**
**ಹರಪ್ಪ ಮಹೆಂಜೊದಾರೊ ಗಿಡಬಳ್ಳಿಗಳಲ್ಲಿ**
**ಬೆಟ್ಟಗುಡ್ಡಗಳ ಬೋಗುಣಿಯಲ್ಲಿ**

ತಮ್ಮ ಚರಿತ್ರೆ ಹುಡುಕುವ ಚಿತ್ರದಲ್ಲಿರುವ ಗಾಂಭೀರ್ಯ ಕಂಡರೆ ಈ ಕವಿ ಹಿರಿಯ ದಲಿತ ಕವಿಗಳ ಕುರುಡು ಅನುಕರಣೆ ಮಾಡದೆ ಬೇರೆಡೆ ನಡೆಯಹೊರಟಿರುವಂತೆ ಕಾಣುತ್ತದೆ. ಭಸ್‌ನಾಲಾದ ಬಗ್ಗೆ, ಬೆಂಗಳೂರಿನಲ್ಲಿ ಬಾಡಿಗೆ ಮನೆ ಸಿಗದ ದಲಿತರ ಬಗ್ಗೆ, ಅಂಬೇಡ್ಕರ್ ಬಗ್ಗೆ ಬರೆಯುವಾಗ ತೀರಾ ಸಾಧಾರಣವಾಗಿ ಬರೆಯುವ ವೆಂಕಟಸ್ವಾಮಿ ಹಿಂದುಳಿದ ವರ್ಗದ ದೇವರುಗಳಿಗೆ ತಿರುಪತಿ, ಗುರುವಾಯೂರುಗಳಲ್ಲಿ ರಿಸರ್ವೇಶನ್ ಕೊಡಬೇಕೆಂದು ಸರ್ಕಾರಕ್ಕೆ ಕೊಟ್ಟ ಮನವಿ ಪತ್ರದ ಶೈಲಿನ್ನನುಕರಿಸಿ ಬರೆದಾಗ, ಸಿದ್ದಲಿಂಗಯ್ಯನವರು ದೇವತೆಗಳ ಬಗ್ಗೆ ಬರೆಯುವಾಗ ಕಾಣುವ ಅಸಹನೆ–ಹಾಸ್ಯಗಳೆರಡರ ಜಾಣ ಮಿಶ್ರಣ ಕಾಣುತ್ತದೆ. ಅಲೆಮಾರಿಯಂತೆ ಕಾಣುವ ವೆಂಕಟಸ್ವಾಮಿಯವರ ಕಾವ್ಯ ಲೋಕಕ್ಕ ಲಖನೌ, ಕಾಶಿ, ಹಿಮಾಲಯ ಮುಂತಾಗಿ ಹಲವು ದಿಕ್ಕುಗಳಿಂದ ಬಾಹ್ಯವಿವರಗಳ ಹರಿದು ಬಂದು ಈ ಕವಿ ದಲಿತತ್ವದ ಸ್ವಮರಕದಲ್ಲಿ ಸಿಕ್ಕಿಬೀಳುವುದನ್ನು ತಪ್ಪಿಸುತ್ತವೆ. ಲಖನೌ ಬೀದಿಯಲ್ಲಿ ಕಂಡ ಜನ 'ನಿಂಬೂ ನೀರಿನಲ್ಲಿ ಗಟಕ್ಕನೆ ಬಿಸಿಲ ನುಂಗುವುದನ್ನು' ಅಥವಾ 'ರಾತ್ರಿ ಜೇಬಿನಲ್ಲಿ ಕೈಯಾಕಿ ಚಳಿಯನ್ನು ಹಿಸುಕುವುದನ್ನು(!)' ಕಣ್ಣಿಗೆ ಕಟ್ಟುವಂತೆ ಚಿತ್ರಿಸಬಲ್ಲ ವೆಂಕಟಸ್ವಾಮಿಯವರಿಗೆ ಈ ವಿವಿರಗಳನ್ನು ಮೀರಿ ಲಖನೌ ನಗರವನ್ನು ಒಂದು ಸಂಸ್ಕೃತಿಯ ಅವಶೇಷದಂತೆ ಅರಿಯುವ ಶಕ್ತಿ ಮಾತ್ರ ಇಲ್ಲ. ಶಿಷ್ಟ ಮಧ್ಯಮವರ್ಗದ ಭಾಷೆಯನ್ನೇ ಬಳಸುವ ವೆಂಕಟಸ್ವಾಮಿ 'ಸಿಗ್ನಲ್ಲಾಕಿ', 'ಮೊಘಲರಚ್ಚಿದ ಗಿಡಗಳು' ಮೊಟ್ಟೆಗಳಾಕುತ್ತಿರಲು' ಎಂಬಂಥ

ಕರ್ಕಶ ಪ್ರಯೋಗಗಳನ್ನು ಬಿಡುವುದೊಳ್ಳೆಯದು. ತಮ್ಮ ಮೊದಲ ಸಂಕಲನದ ನಡುಭಾಗದಲ್ಲಿ ನಾವು ನೆನಪಿನಲ್ಲಿಟ್ಟುಕೊಳ್ಳಬಲ್ಲ ಕೆಲವು ಕವಿತೆಗಳನ್ನಾದರೂ ಬರೆದಿರುವ ವೆಂಕಟಸ್ವಾಮಿ ಭಾಷಿಕ ಪ್ರಯೋಗಗಳ ಬಗ್ಗೆ ಇನ್ನಷ್ಟು ಎಚ್ಚರ ತೋರುವುದು ಕೂಡ ಅಗತ್ಯ.

**– ಡಾ. ನಟರಾಜ್ ಹುಳಿಯಾರ್ 30.4.1997**

**ಕನ್ನಡಪ್ರಭ**

'ಬೆಟ್ಟಗುಡ್ಡಗಳ ಬೋಗುಣಿಯಲ್ಲಿ' ಕವನ ಸಂಕಲನದಲ್ಲಿ ಸಾಮಾಜಿಕ ಅನಿಷ್ಟಗಳ ವಿರುದ್ಧದ ಸೂಕ್ಷ್ಮ ಮನಸ್ಸಿನ ಅಭಿವ್ಯಕ್ತಿ ಇದೆ. ಬಂಡಾಯದ ಶೈಲಿಯಿಂದ ಬಿಡಿಸಿಕೊಂಡಂತಿರುವ ಈ ಕವಿಯ 'ಇರುವೆಯ ಜೊತೆ' 'ಬೆಟ್ಟಗುಡ್ಡಗಳ ಬೋಗುಣಿಯಲ್ಲಿ' 'ಭಸ್‌ನಾಲಾ' 'ವಿಕಾಸ' 'ಪುಟ್ಟ ಹುಡುಗಿ' 'ಲಖನೌ ಬೀದಿ' 'ಕಣ್ಣಕಿಟಿಕಿಗಳಿಂದ' 'ಆ ದಿನ ಅವನ ಹೃದಯ ನಿಂತಾಗ' ಥರದ ಕವಿತೆಗಳಲ್ಲಿ ಹೊಸದೊಂದು ನುಡಿಗಟ್ಟು ಕೇಳಿಸಿದಂತಿದೆ.

ದಲಿತ, ಬಂಡಾಯದ ಮಿತಿಗಳನ್ನು ದಾಟಲು ಬಯಸಿದಂತಿರುವ ಈ ಪದ್ಯಗಳಲ್ಲಿ ತಾಳ್ಮೆ, ಸಂಯಮ ಏಕಾಗ್ರತೆ, ವಿಶಾಲವಾದ ನೋಟವಿರುವುದು ಸ್ಪಷ್ಟವಾಗಿ ಕಾಣುತ್ತದೆ. ಇವರ ಕವನಗಳಿಗೆ ಸಾಂಸ್ಕೃತಿಕ ಚೇತನಹೊಂದಿರುವುದು ವಿಶೇಷ. ಅಬ್ಬರವಿಲ್ಲದೆ ಒಂದು ಮೌನದ ಕತೆಯನ್ನು ಬಣ್ಣ ಬಿಡಿಸಿ ಹೇಳುವಂತೆ ಕವಿತೆ ಬರೆಯಲು ತೊಡಗಿರುವ ಈ ಕವಿಯ ಕಾವ್ಯದ ಹಿಂದಿನ ಮನಸು ಕಾವ್ಯದ ವಿವಿಧ ಬದ್ಧತೆಗಳಿಗೆ ಅಂಟಿಕೊಂಡಿಲ್ಲದಿರುವುದು ಗಮನ ಸೆಳೆಯುತ್ತದೆ.

ಕಣ್ಣಿಗೆ ಕಟ್ಟುವಂತೆ ಚಿತ್ರಗಳನ್ನು ಭಾಷೆಯಲ್ಲಿ ಬಿಡಿಸುವ ಈ ಪದ್ಯಗಳಿಗೆ ಮತ್ತೆ ಮತ್ತೆ ಓದಿಸಿಕೊಳ್ಳುವ ಗುಣವಿದೆ. ಸಾಮಾಜಿಕ ವಿಕೃತಗಳನ್ನು ತೋರುವ ಹಾಗೆಯೇ ನ್ಯಾಯವನ್ನು ಕೇಳುವ ಕ್ರಮ ಇಲ್ಲಿ ಕುತೂಹಲಕರವಾಗಿದ್ದು ಆಸಕ್ತಿ ಕೆರಳಿಸುತ್ತದೆ. ವಾಚ್ಯವಾಗಿ ಹೇಳದೆ ಎಲ್ಲವನ್ನೂ ತನ್ಮಯತೆಯಿಂದ ಬರೆಯುವ ಗುಣದಿಂದ ಈ ಪದ್ಯಗಳಿಗೆ ಆಪ್ತವಾದ ಖಾಸಗೀತನ ಬಂದಿದೆ. ಒಂದೇ ಬಗೆಯ ಧೋರಣೆ ಹಾಗೂ ಒಂದೇ ವಸ್ತುವಿನ ಸುತ್ತ ಗಿರಿಕಿ ಹೊಡೆಯದೆ ಬೇರೆಬೇರೆ ಸಂಗತಿಗಳನ್ನು ಆವಾಹಿಸಿಕೊಂಡು ಭಿನ್ನಭಿನ್ನ ಅನುಭವಗಳನ್ನು ಕೊಡುವ ಇಂಥ ಕವಿತೆಗಳಿಗೆ ಎಲ್ಲರ ಮನಸ್ಸು ತೆರೆದುಕೊಳ್ಳುತ್ತದೆ.

ಆದರೆ ವೆಂಕಟಸ್ವಾಮಿಯವರು ಅತ್ಯಂತ ಸೂಕ್ಷ್ಮವಾಗಿ ತಣ್ಣಗೆ ಆಪ್ತವಾಗಿ ಹೇಳಬೇಕೆಂಬ ಧಾಟಿಯಲ್ಲಿ ಕೂಡ ಕಾವ್ಯದ ವಿಸ್ತಾರ ಅಲೆಗಳನ್ನು ತೋರಿಸದೆ ಕೊನೆಗೆ ಒಂದೇ ಸಂಕಲನಕ್ಕೆ ದಣಿದು, ಮುಂದಿನ ರಚನೆಗಳಿಗೆ ಶುಷ್ಕವಾಗಿ ಹೋಗುವ

ಅಪಾಯವಿರುತ್ತದೆ. ಇಂಥ ವಿಶಿಷ್ಟ ಅಪಾಯದ ದಾರಿಯಲ್ಲಿರುವ ಇವರ ಮುಂದಿನ ಬರಹ ಸಹಜವಾಗಿಯೇ ಕುತೂಹಲ ಕೆರಳಿಸುತ್ತದೆ.

–ಮೊಗಳ್ಳಿ ಗಣೇಶ್ 27.9.1997

**The HINDU**

This anthology of 50 poems stands out as something different from the general run of poetry writers. It breathes freshness and reflects the writer's independence of thought and imagination, besides his courage of conviction and its expression. The angles from which he views the scenario and his comprehension are penetrating, particularly, when he focuses on the sense of right and wrong and fairplay, human dignity, inequalities, exploitation of the weaker sections of society, issues of poverty and hunger, pain and deprivation and several other such dark aspects of modernity and process. They are appealing the moving and stir one's conscience.

The opening piece, 'Shatavarshagala gatha vaibhava' eloquently conveys the agony of the poet's bleeding heart while describing the sweat and toil and frustration of the thousands of the gold digger fraternity in the forbidding depths of the Kolar Gold Fields as it is celebrated its centenary. In the 'Negro galeyanige' there is streak of helplessness and pain of racial segregation and their Indian version of the plight of the Dalits struggling to find their identity. There are quite a few poems on the variants of this state of deprivation and outrage on human dignity. One can instinctively share the writer's wavelength.

So strikingly honed is the sensitivity to everything around him that he dramatizes his perception of the core of even inanimate objects as if they are articulating their own make-up and role and inner structure. Satire is in plentiful supply as when the shrine of Kashi is portrayed for the commercialization behind the fade of sanctity.

On the poet's large canvas hover the tribes of unscrupulous and wayward politicians in their synthetic avatars. Hypocrites and imposters parading as informers and preachers and believers are ripped off their masks. Some of the poet's reveries are both serene and joyous as the case may be. The language is simple and easy.

**- C.M. Ramachandra**



ಈಶಾನ್ಯ ಭಾರತದ ಜನರ ಬದುಕು-ಬವಣೆಗಳನ್ನ ; ಉಲ್ಲಾಸ-ಉತ್ಸಾಹಗಳನ್ನು; ದುಃಖ-ದುಮ್ಮಾನಗಳನ್ನು ತಮ್ಮ ಗದ್ಯ-ಪದ್ಯಗಳ ಮೂಲಕ ಕನ್ನಡ ಓದುಗರಿಗೆ ತೋರಿದವರು ಗೆಳೆಯ ವೆಂಕಟಸ್ವಾಮಿ. ಕೋಲಾರದ ಚಿನ್ನದ ಗಣಿಗಳ ಬಗೆಗಿನ ಇವರ ಮಹಾಪ್ರಬಂಧ ಕೂಡಾ ಕನ್ನಡ ಓದುಗರೆದುರು ಹೊಸತೊಂದು ಲೋಕವನ್ನೇ ಸ್ಫೋಟಿಸಿತು. ಇದೀಗ ಮಿತ್ರ ಡಾ. ಎಂ. ವೆಂಕಟಸ್ವಾಮಿಯವರ ಎರಡನೆಯ ಕವನ ಸಂಕಲನ 'ಹಕ್ಕಿಗಳಿಗೆ ವೀಸಾ ಕೊಟ್ಟಾವರ್‍ಯಾರು' ಪ್ರಕಟವಾಗುತ್ತಿದೆ. ಅದು ಗದ್ಯವಿರಲಿ, ಪದ್ಯವಿರಲಿ ವೆಂಕಟಸ್ವಾಮಿಯವರ ಬರವಣಿಗೆಯ ಹಿಂದೆ ಗಾಢ ಮುಗ್ಧತೆಯಲ್ಲಿ ಅದ್ದಿದ ಮಾನವೀಯ ತುಡಿತವಿದೆ.

ಭೂವಿಜ್ಞಾನಿಯಾಗಿ ಭೂಮಿಯ ಆಳ, ಹದರಗಳನ್ನು ಅರಿಯಲು ಹೊರಟ ವೆಂಕಟಸ್ವಾಮಿ ತಮ್ಮ ಮಣ್ಣಿನ ನಂಟನ್ನು ಎಂದೂ ಬಿಟ್ಟುಕೊಟ್ಟಿಲ್ಲ. ಅಂತೆಯೇ 'ಮಳೆಗಾಲ ಬಂದರೆ, ಮಣ್ಣಿಗೆ ಮೈ ತುಂಬಾ ಕೆಲಸ' ಎಂದು ಬರೆಯಲು ಸಾಧ್ಯವಾಗಿದೆ. ಈ ಸಂಕಲನದಲ್ಲಿ 'ಸ್ಪೇಸ್ ಅಂಡ್ ಟೈಮ್', 'ಅಣುಬಾಂಬ್' ಕುರಿತ ಕವನಗಳಿರುವಂತೆಯೇ, ಜೀವನದ ಸಣ್ಣಪುಟ್ಟ ಸಂತೋಷಗಳನ್ನು ಹಂಚಿಕೊಳ್ಳುವ ವೀಳ್ಯದ ಸೊಗಡನ್ನು ಬಣ್ಣಿಸುವ ಕವನವೂ ಇದೆ.

ಲೇಖಕರು ಹಲವು ವಿದ್ಯುತ್ ಕೃತಿಗಳನ್ನು ಪ್ರಕಟಿಸಿದ್ದರೂ ಬದುಕಿನ ಬಗೆಗಿನ ವಿಸ್ಮಯ, ಅಚ್ಚರಿ, ಬೆಡಗನ್ನು ಉಳಿಸಿಕೊಂಡಿದ್ದಾರೆ. ಇಂಥ ಕವಿಯಲ್ಲಿ ಮಾತ್ರ 'ಹಕ್ಕಿಗಳಿಗೆ ವೀಸಾ ಕೊಟ್ಟಾವರ್‍ಯಾರು', 'ಪರ್ವತಗಳನ್ನು ಯಾರು ಎತ್ತಿ ನಿಲ್ಲಿಸಿದರು ಅಷ್ಟು ಎತ್ತರಕ್ಕೆ' ಎಂಬ ಕವನಗಳು ಹೊಮ್ಮಲು ಸಾಧ್ಯ.

ಕವಿ ಬೆಳೆಯಬೇಕು ಎತ್ತರಕೆ<br>
ಮಣ್ಣಿಂದ ಶಕ್ತಿ ಹೀರಿ ನಿಲ್ಲುವ ಮರದಂತೆ,<br>
ಕವಿತೆಗೆ ಹೊಸ ಭಾವ ಮೂಡಿ ಬರಬೇಕು;<br>
ವಸಂತದಲಿ ಗಿಡ ಮರಗಳು ಚಿಗುರಿದಂತೆ<br>
ಕಾವ್ಯ ಕೊನರಿ ಬಯಲು ಬೆಟ್ಟಗಳೆಲ್ಲ<br>
ಹರಡಬೇಕು, ಪ್ರೀತಿ ಸಮೃದ್ಧಿ ಮಾಡಬೇಕು

..... ಎಂದು ಬರೆವ ಕವಿಯ ಕಾವ್ಯ ಮತ್ತಷ್ಟು ಸಮೃದ್ಧವಾಗಲಿ ಎಂದು ಆಶಿಸುತ್ತಾ.

– ಚಂದ್ರಶೇಖರ ಆಲೂರು



ಸಾಹಿತ್ಯ ಸುಗ್ಗಿ